# ಗುತ್ತಾ





<u>ರಚಿತ</u> : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

www.thraithashakam.org







# ಗುತ್ತಾ


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಆಗಸ್ಟ್ –2016

ಪ್ರತಿಗಳು : 1000 **ಬೆಲೆ. 45/–**

## "ಇಂದೂ ಜ್ಞಾನವೇದಿಕೆ" ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ– ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ತಾಯಿ ತಂದೆ.
27. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## "ಇಂದೂ ಜ್ಞಾನವೇದಿಕೆ" ಪ್ರಕಟಣೆಗಳು

56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ - ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಹೇತುವಾದ ಪ್ರಶ್ನೆಗಳು- ಸತ್ಯವಾದ ಉತ್ತರಗಳು
86. ಮೂರು ದೈವಗ್ರಂಥಗಳು-ಮೂರು ಪ್ರಥಮ ವಾಕ್ಯಗಳು



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ– ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ– ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ– ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು– ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ – ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

## ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ಗ್ರಂಥಮುಲೊ–ಪ್ರಥಮ ವಾಕ್ಯಮುಲು
117. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ‘ಇಂದೂ ಜ್ಞಾನವೇದಿಕೆ’ ಗ್ರಂಥಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : ಶ್ರೀನಿವಾಸ–09705864675, ಲಕ್ಷ್ಮೀನಾರಾಯಣಾಚಾರಿ–09440556968.
ವೆಂಕಟೇಶ್–08096816963.

**(ಇಂದೂ ಜ್ಞಾನ ವೇದಿಕೆ ಸದಸ್ಯರು)**

### ಎ. ರಾಘವೇಂದ್ರ ಶ್ರೇಷ್ಠಿ
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

### ಜಿ. ರಾಧಾಕೃಷ್ಣಾ ರೆಡ್ಡಿ
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

### ಶಿವರಾಜ
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

### R.S. ವೀರಾಚಾರಿ
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560085
Cell : 9036982829

### G. ಮನೋಹರ್
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

### B. ವಾತ್ಸಲ್ಯ
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

### ಬಸವರಾಜ ಅಂಗಡಿ
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

### ಸೂರ್ಯ ಪ್ರಕಾಶ
ಟೈಪ್ ‘ಸಿ’ (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

### ಲೀಲಾವತಿ
ಮಾರುತಿ ಟೆಂಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

### T.V. ರಮಣ
ಕತ್ತರಗುಪ್ಪೆ, ವಾರ್ಡ್.ನೆಂ–38,
ಬೆಂಗಳೂರು–560068
Cell : 08970772028, 07411459912, 07406039453

### M. ನಾರಾಯಣರೆಡ್ಡಿ
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್,
ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಗುತ್ತಾ

"ಗು" ಎಂದರೆ ರಹಸ್ಯ ಎಂದು ಅರ್ಥ. ಜಗತ್ತಿನಲ್ಲಿ ಅತ್ಯಂತ ರಹಸ್ಯವೂ, ಎಲ್ಲದಕ್ಕಿಂತ ದೊಡ್ಡದು, ಯಾರಿಗೂ ತಿಳಿಯದಿರುವುದು ಒಂದೇ ಒಂದು ಇದೆ. ಅದೇ ದೇವರು. ಪ್ರಪಂಚದಲ್ಲಿ ಇಲ್ಲಿಯವರೆಗೂ ಯಾರಿಗೂ ತಿಳಿಯದ ರಹಸ್ಯ ದೇವರು ಮಾತ್ರವೆ. ಯಾರಿಗೂ ತಿಳಿಯದ ರಹಸ್ಯವು ದೇವರು ಆದಾಗ ದೈವವನ್ನು ಕುರಿತು ಯಾರಾದರು ಹೇಗೆ ಹೇಳುತ್ತಾರೆ? ಎಂದು ಪ್ರಶ್ನೆ ಬರುತ್ತದೆ. ಅದಕ್ಕೆ ಉತ್ತರವಾಗಿ ಯಾರು ಹೇಳುವುದಿಲ್ಲವೆಂದೆ ಹೇಳಬಹುದು. ದೇವರ ಬಗ್ಗೆ ಯಾರು ಹೇಳದಿರುವಾಗ, ದೇವರ ಬಗ್ಗೆ ಮನುಷ್ಯರಿಗೆ ಹೇಗೆ ತಿಳಿಯುತ್ತದೆ ಎಂದು ಪ್ರಶ್ನೆ ಬರುತ್ತದೆ. ಅದಕ್ಕೆ ಉತ್ತರವಾಗಿ ಒಂದೇ ಮಾತನ್ನು ಹೇಳಬಹುದು. ಅದೇನೆಂದರೆ! ದೇವರನ್ನು ಕುರಿತಾದ ಜ್ಞಾನವನ್ನು ದೇವರು ತಿಳಿಸಬೇಕೇ ಹೊರತು ಮನುಷ್ಯರು ಹೇಳುವುದಿಲ್ಲವೆಂದು ಏಕಧಾಟಿಯಾಗಿ ಹೇಳಬಹುದು. ಆದರೆ ಇಲ್ಲಿ ಒಂದು ಸಮಸ್ಯೆ ಬಂದಿದೆ. ಅದೇನೆಂದರೆ! ದೇವರು ಯಾರಿಗೂ ತಿಳಿಯದವನೆ ಅಲ್ಲದೆ, ಆತನಿಗೆ ರೂಪವಾಗಲಿ, ಹೆಸರಾಗಲಿ, ಕೆಲಸವಾಗಲಿ ಯಾವುದೂ ಇಲ್ಲ. ರೂಪ, ನಾಮ, ಕ್ರಿಯೆಗಳು ಇಲ್ಲದಿರುವಾಗ, ಒಂದು ಕ್ರಿಯೆ (ಕೆಲಸ) ಆದ ಜ್ಞಾನ ತಿಳಿಸುವುದನ್ನು ದೇವರು ಮಾಡುವುದಿಲ್ಲ ತಾನೆ! ಅಷ್ಟೇ ಅಲ್ಲದೆ ಆಕಾರ, ಹೆಸರು ಇಲ್ಲದವನು ಹೇಗೆ ಹೇಳುತ್ತಾನೆ? ಆಕಾರವಿರುವವನು ಹೇಳಿದರೂ ಅರ್ಥವಾಗದ ಮನುಷ್ಯರಿಗೆ, ಆಕಾರ ಇಲ್ಲದಂತೆ ಮಾತುಗಳ ರೂಪದಿಂದ ಹೇಳುವುದಕ್ಕೆ ಸಾಧ್ಯವಿಲ್ಲ. ಈ ವಿಧವಾಗಿ ಹೆಸರಿಲ್ಲದವನು, ಆಕಾರವೇ ಇಲ್ಲದವನು, ಕೆಲಸವೇ ಮಾಡದವನು ದೈವ ಜ್ಞಾನವನ್ನು ತಿಳಿಸುವುದಕ್ಕೆ ಅವಕಾಶವೇ ಇಲ್ಲ. ಅಂತಹದರಲ್ಲಿ ದೇವರಿಗೆ ಹೊರತು ಯಾರಿಗೂ ತಿಳಿಯದ ದೇವರ ಜ್ಞಾನ, ಮಾನವರಿಗೆ ಹೇಗೆ ತಿಳಿಯುತ್ತದೆಂದು ಯಾರಾದರು ಕೇಳಬಹುದು. ಇತ್ತ ನೋಡಿದರೆ ಬಾವಿ ಅತ್ತ ನೋಡಿದರೆ ಗುಂಡಿ ಎನ್ನುವಂತಿರುವ ಈ ಪ್ರಶ್ನೆಗಳಿಗೆ ಉತ್ತರ ಹೇಳುವುದು ಬಹಳಕಷ್ಟ. ಎಷ್ಟು ಯೋಚಿಸಿದರು ಉತ್ತರ ಸಿಗದ ಈ ಪ್ರಶ್ನೆಗೆ ಕೊನೆಗೆ ದೇವರೇ ಉತ್ತರ ಹೇಳಬೇಕು. ಆ ವಿಧಾನದ ಪ್ರಕಾರವೇ ನಮ್ಮ ಯೋಚನೆಗೆ ಒಂದು ಉತ್ತರ ದೊರೆತಿದೆ.

ಅದೇನೆಂದರೆ! ದೇವರು ದೇವರಾಗಿ ಎಂದಿಗೂ ತನ್ನ ಜ್ಞಾನ ಹೇಳುವುದಿಲ್ಲ. ಆದರೆ ದೇವರು ದೇವರಾಗಿ ಅಲ್ಲದೆ ಮತ್ತೊಂದು ವಿಧವಾಗಿ ಹೇಳುವುದಕ್ಕೆ ಅವಕಾಶವಿದೆ. ಮತ್ತೊಂದು ವಿಧಾನವಾಗಿ ಎಂದರೆ ಹೇಗೆ ಎಂದು ಯೋಚಿಸಿದರೆ, ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 15ನೇ ಶ್ಲೋಕದಲ್ಲಿ "ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ ಮತ್ತಃ ಸ್ಮೃತಿರ್ಜ್ಞಾನಮಪೋಹನಂಚ" ಎನ್ನುವಂತೆ ಸರ್ವ ಮಾನವರ ಹೃದಯದಲ್ಲಿರುವ ದೇವರೇ ಎಲ್ಲರಿಗೂ ಜ್ಞಾಪಕವನ್ನು, ಜ್ಞಾನವನ್ನು, ಊಹೆಗಳನ್ನು ತಿಳಿಸುತ್ತಿದ್ದಾನೆ. (ದೇವರು ದೇವರಾಗಿ ಅಲ್ಲದೆ ಆತ್ಮವಾಗಿ ಈ ಕೆಲಸವನ್ನು ಮಾಡುತ್ತಿದ್ದಾನೆ.) ನನ್ನ ಯೋಚನೆಗೂ ಸಹ ನನ್ನ ಶರೀರದಲ್ಲಿ ಹೃದಿ ಸ್ಥಾನದಲ್ಲಿರುವ ಆತ್ಮವೇ ಒಂದು ಊಹೆಯನ್ನು ಉತ್ತರವಾಗಿ ತಿಳಿಸಿದೆ. ಅದೇನೆಂದರೆ!)

ದೇವರ ಜ್ಞಾನ ಭೂಮಿಮೇಲೆ ಅಗತ್ಯವಾದಾಗ, ದೇವರ ಜ್ಞಾನ ದೇವರಿಗೆ ಹೊರತು ಯಾರಿಗೂ ತಿಳಿದಿಲ್ಲ. ಆದ್ದರಿಂದ ದೇವರು ಸ್ವತಃ ಹೇಳದಂತೆ ಮತ್ತೊಂದು ವಿಧಾನವನ್ನು ಅನುಸರಿಸಿ ಹೇಳುತ್ತಾನೆ. ಆ ವಿಧಾನದ ಪ್ರಕಾರ ದೇವರ ಜ್ಞಾನವನ್ನು ಯಾವ ಮನುಷ್ಯ ಹೇಳದಂತೆ ದೇವರೇ ಹೇಳಿದರೂ, ದೇವರು ಸ್ವತಃ ಹೇಳಿದಂತೆಯೂ ಸಹ ಇರುವುದಿಲ್ಲ ಮತ್ತು ಮನುಷ್ಯ ಸ್ವತಃ ಹೇಳಿದಂತೆಯೂ ಇರುವುದಿಲ್ಲ. ಕಾಣಿಸುವ ಮನುಷ್ಯನೇ ದೇವರ ಜ್ಞಾನವನ್ನು ಹೇಳಿದಲ್ಲಿಯೂ, ಒಳಗಿನಿಂದ ಹೇಳಿದವನು ಮನುಷ್ಯನಲ್ಲ (ಜೀವಿಯಲ್ಲ). ಹಾಗೆಯೇ ಒಳಗಿನಿಂದ ಹೇಳಿದವನು ದೇವರೂ ಅಲ್ಲ. ಈ ವಿಧಾನದ ಪ್ರಕಾರ ಇತ್ತ ಮನುಷ್ಯ ಹೇಳಿದಂತಾಗಲಿ, ಅತ್ತ ದೇವರು ಹೇಳಿದಂತಾಗಲಿ ಕಾಣಿಸುವುದಿಲ್ಲ. ಈಗ ಇತ್ತ ಮನುಷ್ಯನು ಹೇಳದೆ, ಅತ್ತ ದೇವರೂ ಹೇಳದೆ ಯಾರು ಹೇಳಿದ್ದಾರೆ ಎನ್ನುವ ಪ್ರಶ್ನೆ ಬರಬಹುದು ಅಲ್ಲವೆ! ಅದಕ್ಕೆ ಸಮಾಧಾನ ಹೀಗೆ ಇದೆ. ದೇವರ ಜ್ಞಾನ ಭೂಮಿಮೇಲೆ ಯಾವ ಮನುಷ್ಯನಿಗೂ ತಿಳಿದಿಲ್ಲ, ಆದ್ದರಿಂದ ಮನುಷ್ಯ ಹೇಳಿದ್ದಾನೆ ಎನ್ನುವುದಕ್ಕೆ ಸಾಧ್ಯವಿಲ್ಲ. ಹಾಗೆಯೇ ದೇವರು ಯಾವ ಕೆಲಸವನ್ನು ಮಾಡುವುದಿಲ್ಲ, ಆದ್ದರಿಂದ ಮನುಷ್ಯನೊಳಗಿಂದ ದೇವರು ಹೇಳಿದ್ದಾನೆನ್ನುವುದಕ್ಕೂ

ಸಾಧ್ಯವಿಲ್ಲ. ಆದ್ದರಿಂದ ದೇವರು ಪ್ರತ್ಯೇಕವಾದ ವಿಧಾನವನ್ನು ಮೊದಲೇ ಏರ್ಪಡಿಸಿ ಅದರ ಪ್ರಕಾರ ಹೇಳಿದ್ದಾನೆಂದು ಹೇಳಬಹುದು. ಆ ಪ್ರತ್ಯೇಕ ವಿಧಾನವನ್ನು ವಿವರಿಸಿಕೊಂಡು ನೋಡಿದರೆ ಇತ್ತ ಮನುಷ್ಯನಲ್ಲದೆ, ಅತ್ತ ದೇವರೂ ಅಲ್ಲದೆ, ಮನುಷ್ಯನಿಗೂ ದೇವರಿಗೂ ಮಧ್ಯದಲ್ಲಿ ಆತ್ಮ ಒಂದಿದೆ. ದೇವರು ವಿಶ್ವದಲ್ಲಿ ಜೀವರಾಶಿಗಳನ್ನು ಸೃಷ್ಟಿಸಿದಾಗಲೇ ತನಗೂ (ದೇವರಿಗೆ), ಜೀವಾತ್ಮನಿಗೂ (ಮನುಷ್ಯನಿಗೆ) ಮಧ್ಯದಲ್ಲಿ ಆತ್ಮವನ್ನು ಮೊದಲೇ ಪದ್ಧತಿ ಪ್ರಕಾರ ಸೃಷ್ಟಿಸಿದ್ದಾನೆ. ಬಹಳಜನ ಜ್ಞಾನಿಗಳಿಗೆ, ಭಕ್ತರಿಗೆ ಜೀವಾತ್ಮ ದೇವರು ಎಂಬ ಎರಡು ಪದಗಳೆ ಹೆಚ್ಚಾಗಿ ತಿಳಿದಿದೆ ಆದರೆ ಮಧ್ಯದಲ್ಲಿರುವ ಆತ್ಮವನ್ನು ಕುರಿತು ತಿಳಿದಿಲ್ಲ. ಆತ್ಮ ಎಂಬ ಪದವು ಅನೇಕ ಸಂದರ್ಭಗಳಲ್ಲಿ ಮಾತನಾಡುತ್ತಿದ್ದರೂ, ಅದನ್ನು ಕೆಲವರು ದೆವ್ವವಾಗಿಯೊ ಇಲ್ಲವೇ ಕೆಲವರು ದೇವರಾಗಿಯೋ ಅಂದುಕೊಳ್ಳುತ್ತಾರೆ. ಕೆಲವರು ಅಜ್ಞಾನಿಗಳು ಆತ್ಮವನ್ನು ದೆವ್ವವಾಗಿ ಹೇಳಿಕೊಂಡರೆ, ಕೆಲವರು ಜ್ಞಾನಿಗಳು ಆತ್ಮವನ್ನು ದೇವರಾಗಿ ಹೇಳಿಕೊಳ್ಳುತ್ತಾರೆ. ಯಾರು ಹೇಗೆ ಹೇಳಿಕೊಂಡರು ಆತ್ಮ ಇತ್ತ ಜೀವಿಯೂ ಅಲ್ಲ, ಅತ್ತ ದೇವರೂ ಅಲ್ಲ.

ಆತ್ಮ ಯಾವಾಗಲೂ ಜೀವಿಗೆ ಜೊತೆಯಾಗಿರುವಂತೆ ದೇವರು ಸೃಷ್ಟಿಸಿದ್ದಾನೆ. ಒಂದು ಸಜೀವ ಶರೀರದಲ್ಲಿ ಜೀವಿ ಇರುವಾಗ, ಜೀವಿಗೆ ಜೊತೆಯಾಗಿ ಆತ್ಮವೂ ಸಹ ಇದೆ. ಒಂದು ಶರೀರದಲ್ಲಿರುವ ಆತ್ಮದ ಬಗ್ಗೆ ಅಧ್ಯಯನ ಮಾಡುವುದನ್ನೇ ಆಧ್ಯಾತ್ಮಿಕ ಎನ್ನುತ್ತಾರೆ. ಈಗ ಆತ್ಮದ ಬಗ್ಗೆ ಪೂರ್ತಿಯಾಗಿ ತಿಳಿದುಕೊಳ್ಳಬೇಕೆಂದರೆ ಪೂರ್ತಿ ಆಧ್ಯಾತ್ಮಿಕವಾಗುತ್ತದೆ. ಈಗ ಅಷ್ಟು ಅಗತ್ಯವಿಲ್ಲದಂತೆ ಪ್ರಸ್ತುತಕ್ಕೆ ಎಷ್ಟು ಅಗತ್ಯವೋ ಅಷ್ಟು ಮಾತ್ರವೇ ಆತ್ಮದ ಬಗ್ಗೆ ತಿಳಿದುಕೊಳ್ಳೋಣ. ಇಲ್ಲಿಯವರೆಗೂ ಆತ್ಮ ಯಾರ ಅಲೋಚನೆಗೆ ಸಿಗಲಿಲ್ಲವೆಂದೆ ಹೇಳಬಹುದು. ಚೆನ್ನಾಗಿ ಜ್ಞಾನ ತಿಳಿದ ವ್ಯಕ್ತಿಯ ಹತ್ತಿರಕ್ಕೆ ಹೋಗಿ ಆತ್ಮದ ಬಗ್ಗೆ ಕೇಳಿದರೆ, ಅದನ್ನು ಅಂತರಾತ್ಮ ಎನ್ನುತ್ತಾರೆಂದು, ಆತ್ಮ ಶರೀರದೊಳಗೆ ಇರುತ್ತದೆ ಎಂದು ಹೇಳಿದ್ದಾನೆ. ಆತನು ಆತ್ಮದ ಬಗ್ಗೆ ತಿಳಿದಿದ್ದು ಹೇಳಿದರೂ, ಆತನ ಮಾತು ಪೂರ್ತಿ ಸತ್ಯವೇ ಎನ್ನುವಂತೆ ಅನಿಸಿದರೂ,

ವಾಸ್ತವಕ್ಕೆ ಆತ್ಮ ಶರೀರದೊಳಗೆ ಅಡಗಿರುವ ಅಂತರಾತ್ಮವಲ್ಲ. ಅದು ಶರೀರದ ಮೇಲೆ ಬಾಹ್ಯವಾಗಿ ಇರುವುದೇ. ಜೀವಾತ್ಮ (ಜೀವಿಯು) ಮಾತ್ರ ಶರೀರದೊಳಗೆ ಯಾರಿಗೂ ಕಾಣಿಸದೆ ಇರುತ್ತದೆ. ಆದ್ದರಿಂದ ಅಂತರಾತ್ಮ ಎನ್ನುವಮಾತು ಜೀವಾತ್ಮಕ್ಕೆ ಅನ್ವಯಿಸುತ್ತದಾಗಲಿ, ಆತ್ಮಕ್ಕೆ ಅನ್ವಯಿಸುವುದಿಲ್ಲ. ಇಲ್ಲಿ ಆತ್ಮ ವಿಷಯದಲ್ಲಿ ಎಷ್ಟೋ ಜನ ತಪ್ಪಾಗಿ ತಿಳಿದುಕೊಳ್ಳುತ್ತಿದ್ದಾರೆ. ಯಾರು ಏನೆಂದುಕೊಂಡರೂ ಜೀವಾತ್ಮಕ್ಕೆ ಜೊತೆಯಾಗಿ ಆತ್ಮ ಪ್ರತಿ ಶರೀರದಲ್ಲಿ ಇದೆ. ಪ್ರಪಂಚದಲ್ಲಿ ಒಬ್ಬವ್ಯಕ್ತಿ ಇದ್ದಾನೆಂದರೆ ಆತನಲ್ಲಿ ಒಂದು ಜೀವಾತ್ಮ, ಒಂದು ಆತ್ಮ ಎರಡೂ ಜೋಡಿ ಆತ್ಮಗಳಾಗಿರುತ್ತವೆಂದು ತಿಳಿಯಬೇಕು. ಇದೇ ಸೂತ್ರ ಪ್ರತಿ ಪ್ರಾಣಿಗೂ ಅನ್ವಯಿಸುತ್ತದೆ. ಭೂಮಿಮೇಲೆ ಪ್ರತಿ ವ್ಯಕ್ತಿಯಲ್ಲಿಯೂ, ಯಾವ ಮತಸ್ಥನ ಶರೀರದಲ್ಲಿ ಆದರೂ ಜೀವಾತ್ಮ ಆತ್ಮಗಳು ಇರುತ್ತವೆ. ಶರೀರವೆಲ್ಲವನ್ನು ಮೇಲಿನವರೆಗೂ ಆಕ್ರಮಿಸಿ ಶರೀರವನ್ನು ಮಾತನಾಡಿಸುವುದು, ಆಟಾಡಿಸುವುದು, ಕದಲಿಸಿ ಕೆಲಸ ಮಾಡಿಸುವುದು ಆತ್ಮವಾದರೆ, ಜೀವಾತ್ಮ ಶರೀರದೊಳಗೆ ಕಾಣಿಸದ ಸ್ಥಳದಲ್ಲಿದ್ದು ಹೊರಗಿನಿಂದ ಬರುವ ಕಷ್ಟಸುಖಗಳನ್ನು ಅನುಭವಿಸುತ್ತಿರುತ್ತಾನೆ. ಆದರೆ ಇಲ್ಲಿಯವರೆಗೂ ಎಲ್ಲ ಕೆಲಸಗಳು ಮಾಡುವುದು ಆತ್ಮವೇ ಎಂದು, ಜೀವಾತ್ಮ ಯಾವ ಕೆಲಸವನ್ನು ಮಾಡುವುದಿಲ್ಲವೆಂದು ಯಾರಿಗೂ ತಿಳಿದಿಲ್ಲ. ಜೀವಿಯೆ ಎಲ್ಲಾ ಕೆಲಸಗಳು ಮಾಡುತ್ತಿದ್ದಾನೆಂದು ಎಲ್ಲರೂ ಅಂದುಕೊಳ್ಳುವುದು ನಡೆಯುತ್ತಿದೆ. ಈ ವಿಧವಾಗಿ ವಿಚಿತ್ರವಾಗಿ ಯಾರಿಗೂ ತಿಳಿಯದಂತೆ ಎಲ್ಲ ಕೆಲಸಗಳು ಮಾಡುತ್ತಿರುವ ಆತ್ಮವನ್ನು ಪ್ರತಿ ಶರೀರದಲ್ಲಿ ದೇವರು ಇಟ್ಟಿದ್ದಾನೆ.

ದೇವರು ಆತ್ಮಕ್ಕಿಂತ ಪರವಾಗಿ (ಬೇರೆಯಾಗಿ) ದ್ದಾನೆ. ಆದ್ದರಿಂದ ದೇವರನ್ನು ಪರಮಾತ್ಮ ಎನ್ನಬಹುದು. ಆತ್ಮಗಿಂತ ಬೇರೆಯಾಗಿರುವ ಪರಮಾತ್ಮ ತನ್ನ ಜ್ಞಾನವನ್ನು ಆತ್ಮನಿಂದ ಮನುಷ್ಯರಿಗೆ ಹೇಳಿಸುವಂತೆ ಮೊದಲೆ ಏರ್ಪಾಟು ಮಾಡಿದೆ. ಮನುಷ್ಯರಿಗೆ ಅಗತ್ಯ ಬಂದಾಗ ಆತ್ಮ ದೇವರ ಜ್ಞಾನವನ್ನು ಹೇಳುತ್ತಿದೆ. ಜೀವಿಗೂ ದೇವರಿಗೂ ಮಧ್ಯದಲ್ಲಿರುವ ಆತ್ಮ, ದೇವರ ಜ್ಞಾನವನ್ನು ಹೇಳುವುದರಿಂದ ದೇವರು ತನ್ನ ಜ್ಞಾನವನ್ನು ಸ್ವತಃವಾಗಿ ಹೇಳಿದಂತಲ್ಲದೆ

ಹೋಗಿದೆ. ಆತ್ಮ ಮನುಷ್ಯನೊಳಗಿನಿಂದ ಹೇಳುವುದರಿಂದ ಮೇಲ್ನೋಟಕ್ಕೆ ಮನುಷ್ಯ ಹೇಳಿದಂತೆ ಕಾಣಿಸಿದರೂ, ಹೇಳುವ ಮನುಷ್ಯನಿಗೆ ದೇವರ ಜ್ಞಾನ ಸ್ವಲ್ಪವೂ ತಿಳಿಯುವುದಿಲ್ಲ. ಮಧ್ಯದಲ್ಲಿರುವ ಆತ್ಮ ಹೇಳುವುದರಿಂದ ಮನುಷ್ಯನಿಗೆ ತಿಳಿದಿಲ್ಲವೆಂದೇ ಹೇಳಬಹುದು. ಮನುಷ್ಯನಿಗೆ ತಿಳಿಯದ ಜ್ಞಾನವನ್ನು ದೇವರು ತಾನು ಸ್ವತಃ ಹೇಳದಂತೆ, ತನ್ನ ಅಂಶವನ್ನು ಆತ್ಮದಲ್ಲಿ ಸೇರಿಸಿ, ಮನುಷ್ಯರಿಗೆ ಮನುಷ್ಯರಿಂದಲೇ ಹೇಳಿಸುವಂತೆ ಮಾಡುತ್ತಿದ್ದಾನೆ. ಆತ್ಮ ಮಾಡುವ ಪ್ರತಿ ಕೆಲಸ ಮನುಷ್ಯನೇ ಮಾಡುತ್ತಿದ್ದಾನೆಂದು ಪ್ರಪಂಚದಲ್ಲಿ ಮನುಷ್ಯರೆಲ್ಲರೂ ಅಂದುಕೊಳ್ಳುವುದರಿಂದ ಒಂದು ಶರೀರದಿಂದ ಆತ್ಮ, ದೈವಜ್ಞಾನವನ್ನು ಬೋಧಿಸಿದರೂ, ಅದನ್ನು ಮನುಷ್ಯನೇ ಬೋಧಿಸಿದ್ದಾನೆಂದು ಎಲ್ಲರೂ ಅಂದುಕೊಳ್ಳುವುದು ನಡೆಯುತ್ತಿದೆ. ಈ ವಿಧವಾಗಿ ದೇವರು ಒಂದು ಪ್ರತ್ಯೇಕ ವಿಧಾನವನ್ನು ಅನುಸರಿಸಿ ಮನುಷ್ಯ ಹೇಳದಂತೆ, ತಾನೂ ಹೇಳದಂತೆ ಮನುಷ್ಯರಿಗೆ ತನ್ನ ಜ್ಞಾನವನ್ನು ತಿಳಿಸುತ್ತಿದ್ದಾನೆ.

ಇಲ್ಲಿ ಇನ್ನೂ ಸ್ವಲ್ಪ ವಿವರವನ್ನು ತಿಳಿದುಕೊಳ್ಳಬೇಕಾಗಿದೆ. ತನ್ನ ಪ್ರತ್ಯೇಕವಾದ ವಿಧಾನದಲ್ಲಿ ದೇವರಲ್ಲಿನ ಒಂದು ಅಂಶ ಆತ್ಮನಲ್ಲಿ ಸೇರಿಹೋಗುವು ದರಿಂದ ಆತ್ಮ, ದೈವಜ್ಞಾನವನ್ನು ಬೋಧಿಸುತ್ತಿದೆ. ಇಲ್ಲದೆ ಹೋದರೆ ಆತ್ಮಕ್ಕೂ ಸಹ ಪರಮಾತ್ಮ ಜ್ಞಾನ ಪೂರ್ತಿಯಾಗಿ ತಿಳಿದಿಲ್ಲ. ದೇವರಿಗೆ ಲೆಕ್ಕವಿಲ್ಲದಷ್ಟು ಅಂಶಗಳು ಇವೆ. ಭಗವದ್ಗೀತೆಯಲ್ಲಿ ವಿಭೂತಿಯೋಗದಲ್ಲಿ ಕೊನೆಯ 42ನೇ ಶ್ಲೋಕದಲ್ಲಿ "ಏಕಾಂಶೇನ ಸ್ಥಿತೋ ಜಗತ್" ಎಂದು ಇದೆ. ದೇವರಿಗಿರುವ ಎಷ್ಟೋ ಅಂಶಗಳಲ್ಲಿ ಒಂದು ಅಂಶದಿಂದಲೇ ಈ ಜಗತ್ತು ಎಲ್ಲವೂ ಸೃಷ್ಟಿಸಲ್ಪಟ್ಟಿದೆ. ಅಂತಹದರಲ್ಲಿ ಆತನ ಅಂಶ ಎಂದರೆ ಎಂತಹದ್ದೋ ನಾವು ಅರ್ಥಮಾಡಿಕೊಳ್ಳ ಬಹುದು. ಒಂದು ಅಂಶದಿಂದ ಸರ್ವಪ್ರಪಂಚವನ್ನು ಸ್ಥಾಪಿಸಲ್ಪಟ್ಟಿರುವಾಗ, ಒಂದು ಅಂಶ ಆತ್ಮನಲ್ಲಿ ಸೇರಿ ಭೂಮಿಮೇಲೆ ಪ್ರಜೆಗಳಿಗೆ ಅಗತ್ಯಬಂದಾಗ ಕೆಲವು ಯುಗಗಳಿಗೊಂದು ಬಾರಿ ತನ್ನ ಜ್ಞಾನವನ್ನು ಬೋಧಿಸಿ ಪುನಃ ದೇವರೊಳಗೇ ಸೇರಿಹೋಗುತ್ತಿದೆ. ಹಾಗೆ ಪ್ರತ್ಯೇಕವಾದ ವಿಧಾನದಿಂದ ಆತ್ಮದೊಳಗೆ

ಸೇರಿದ ಪರಮಾತ್ಮನ ಅಂಶ, ತಾನು ಜ್ಞಾನವನ್ನು ಬೋಧಿಸುವಾಗ ತಾನು ಮನುಷ್ಯನ ಶರೀರದಿಂದ ಬೋಧಿಸುತ್ತಿದ್ದರೂ, ತಾನು ಪರಮಾತ್ಮನೇ ಎಂದು ಅವಶ್ಯಕತೆಯನ್ನನುಸರಿಸಿ ಹೇಳುತ್ತಾನೆ. ಅವಶ್ಯವಿಲ್ಲದಿದ್ದರೆ ಸ್ವಲ್ಪವೂ ಸಹ ಹೊರಬೀಳುವುದಿಲ್ಲ. ಎಲ್ಲಾ ಆತನ ಇಷ್ಟ. ಮನುಷ್ಯನಾದ ಕೃಷ್ಣನ ಶರೀರದಿಂದ ಜ್ಞಾನವನ್ನು ಬೋಧಿಸುವಾಗ ನಾನೇ ಪರಮಾತ್ಮನೆಂದು ಸಹ ದೇವರು ತಿಳಿಸಿದ್ದಾನೆ. ಅದು ಒಂದು ನಿರೂಪಣೆ ನಿಮಿತ್ತ ತನ್ನ ವಿಧಾನವನ್ನು ತಿಳಿಸುವುದಕ್ಕೆ ಹಾಗೆ ತಿಳಿಸಿದ್ದಾನೆ. ದ್ವಾಪರಯುಗದಲ್ಲಿ ಕೃಷ್ಣನ ಶರೀರದಿಂದ ತಿಳಿಸಲಾದ ವಿಷಯ ಗಳನ್ನನುಸರಿಸಿ, ದೇವರು ಮನುಷ್ಯನಲ್ಲಿ ಆತ್ಮನಿಂದ ಮಾತನಾಡುತ್ತಾನೆಂದು ಸಾಬೀತಾಗಿದೆ.

ದೇವರು ತನ್ನ ಜ್ಞಾನವನ್ನು ಐದುಸಾವಿರ ವರ್ಷಗಳ ಪೂರ್ವದಲ್ಲಿ ದ್ವಾಪರಯುಗದಲ್ಲಿ ಶ್ರೀಕೃಷ್ಣನ ಶರೀರದಿಂದ ಜ್ಞಾನವನ್ನು ಬೋಧಿಸಿದ್ದಾನೆ. ನಂತರ ಒಂದು ಬಾರಿ ಅದೇ ವಿಧವಾಗಿ ಬೋಧಿಸಿದ್ದಾನೆಂದು ತಿಳಿಯುತ್ತಿದೆ. ನಂತರವೂ ಸಹ ಮತ್ತೊಂದು ಸಾರಿ ಬೋಧಿಸಬೇಕಾದ ಅಗತ್ಯವಿದೆ. ದೇವರು ಮೂರು ಬಾರಿ ಭೂಮಿಮೇಲೆ ಬಂದರೆ ಆತನು ಪೂರ್ತಿಯಾಗಿ ತನ್ನ ಧರ್ಮಗಳನ್ನು ಬೋಧಿಸಿದಂತಾಗುತ್ತದೆ. ಎರಡು ಬಾರಿ ತನ್ನ ಧರ್ಮಗಳನ್ನು ಜ್ಞಾನರೂಪದಲ್ಲಿ ತಿಳಿಸಿದರೂ, ಮಾನವರು ಅವುಗಳ ವಿವರವನ್ನು ಗ್ರಹಿಸಲಾರರು. ಆದ್ದರಿಂದ ಮೂರನೆ ಬಾರಿ ಬಂದು ತಾನು ಹೇಳಿದವುಗಳಿಗೆ ಪೂರ್ತಿ ವಿವರವನ್ನು ತಿಳಿಸುತ್ತಾನೆ.

ಇಲ್ಲಿಗೆ ದೇವರ ಧರ್ಮಗಳು ಭೂಮಿಮೇಲೆ ಎರಡು ಬಾರಿ ಬೋಧಿಸಲ್ಪಟ್ಟಾಗ ಮನುಷ್ಯರೆ ಅಲ್ಲದೆ ಗ್ರಹರೂಪದಲ್ಲಿ ಮತ್ತು ಭೂತಗಳ ರೂಪದಲ್ಲಿರುವ ಕೆಲವರು ಕೇಳಿ, ಅವುಗಳನ್ನು ಭೂಮಿಮೇಲೆ ಮುಖ್ಯವಾದ ವ್ಯಕ್ತಿಗಳಿಗೆ ಕೆಲವರಿಗೆ ಬೋಧಿಸಿದ್ದಾರೆ. ಆದರೆ ಅವರು ಕೆಲವು ಧರ್ಮಗಳನ್ನು ಹೇಳಿದರೂ ಅವುಗಳ ವಿವರವು ತಮಗೆ ತಿಳಿದಿಲ್ಲವೆಂದು, ಅವುಗಳ ವಿವರವು ದೇವರಿಗೇ ತಿಳಿಯುತ್ತದೆಂದು ಹೇಳಿದ್ದಾರೆ. ದೂತ ಎಂದು ಕರೆಯಲಾದ

ಭೂತಗಳು ಇಲ್ಲವೆ ಗ್ರಹಗಳಿಂದ ತಿಳಿದುಕೊಂಡ ವ್ಯಕ್ತಿಗಳು ತಾವು ಕೇಳಿದ ಬೋಧನೆಗಳನ್ನು ವ್ಯಕ್ತರಾಗಿ ಇತರರಿಗೆ ಹೇಳಿದಾಗ, ಇವುಗಳ ಅಂತರಾರ್ಥವು ಭವಿಷ್ಯತ್ತಿನಲ್ಲಿ ಬರುವವರು ತಿಳಿಯುತ್ತಾರೆಂದು ಹೇಳಿದ್ದಾರೆ. ಇದನ್ನನುಸರಿಸಿ ದೂತಗಳ ಮೂಲಕ ಕೇಳಿದ ವ್ಯಕ್ತಿಗಳೂ ಸಹ ಕೆಲವು ವಾಕ್ಯಗಳ ಪರಮಾರ್ಥವು ತಮಗೆ ತಿಳಿದಿಲ್ಲವೆಂದೇ ಹೇಳಿದ್ದಾರೆಂದು ತಿಳಿಯುತ್ತಿದೆ. ಈ ವಿಧವಾಗಿ ದೇವರೇ ಅಲ್ಲದೆ ದೇವರು ಹೇಳಿದಾಗ ಕೇಳಿದ ಸೂಕ್ಷ್ಮ (ಕಾಣಿಸದ) ಗ್ರಹಗಳು ಸಹ ದೂತಗಳ ಹೆಸರಿನಿಂದ ಭೂಮಿ ಮೇಲೆ ಅಲ್ಲಲ್ಲಿ ಕೆಲವರಿಗೆ ತಿಳಿಸಿದಂತೆ ಅರ್ಥವಾಗುತ್ತಿದೆ.

ದ್ವಾಪರ, ಕಲಿಯುಗಗಳಲ್ಲಿ ದೇವರು ಕಾಣಿಸುವ ಮನುಷ್ಯನಿಂದ ಎರಡು ಬಾರಿ ಹೇಳಿದರೂ, ಅದೇ ಜ್ಞಾನವನ್ನೇ ಕಾಣಿಸದ ಗ್ರಹಗಳು, ದೇವದೂತರು ಎನ್ನುವ ಹೆಸರಿನಿಂದ ಮನುಷ್ಯರಿಗೆ ಹೇಳಿದರೂ, ಹೇಳಿದ ಜ್ಞಾನವೆಲ್ಲವೂ ಮತಗಳಾಗಿ ಬದಲಾಗಿಹೋಗಿದೆ. ಆದರೆ ಹೇಳಲಾದ ಜ್ಞಾನದ ವಿವರವು ಮಾತ್ರ ಯಾರಿಗೂ ತಿಳಿಯದಂತೆಹೋಗಿದೆ. ದೇವರ ಜ್ಞಾನವನ್ನು ಮಾಯೆ ಮತಗಳಾಗಿ ಮಾರ್ಪಡಿಸುವುದರಿಂದ ಒಂದೇ ದೇವರ ಜ್ಞಾನ ಮತಗಳ ರೂಪದಲ್ಲಿ ಬೇರೆ ಬೇರೆಯಾಗಿ ಕಾಣಿಸುತ್ತಿದೆ. ಹಾಗೆ ಕಾಣಿಸುವುದರಿಂದ ಬೇರೆ ಬೇರೆ ಮತಗಳಿಗೆ ಬೇರೆ ಬೇರೆ ದೇವರು ಇರುವಂತೆ ಆಯಾ ಮತದವರಿಗೆ ಅರ್ಥ ವಾಗಿದೆ. ಈ ವಿಧವಾಗಿ ದೇವರ ಜ್ಞಾನ ಮತಗಳಾಗಿ ಸೀಳಿಹೋಗಿ ಒಂದೇ ದೇವರ ಜ್ಞಾನವೇ ಕೆಲವರಿಗೆ ಭಗವದ್ಗೀತೆ ಎಂದು, ಕೆಲವರಿಗೆ ಬೈಬಲ್ ಎಂದು, ಮತ್ತೆ ಕೆಲವರಿಗೆ ಖುರಾನ್ ಎಂದು ತಿಳಿಯಲಾಗಿದೆ. ಆಗಾದರೂ ಅವರವರ ಗ್ರಂಥಗಳಲ್ಲಿನ ವಾಕ್ಯಗಳಿಗೆ ಅರ್ಥ ನಮಗೆ ತಿಳಿದಿದೆಯೆಂದು ಆಯಾ ಮತದವರು ಅಂದುಕೊಂಡರೂ, ವಾಸ್ತವಕ್ಕೆ ಅವುಗಳ ಪರಮಾರ್ಥವು ಮಾತ್ರ ಯಾರಿಗೂ ತಿಳಿದಿಲ್ಲ. ಭಗವದ್ಗೀತೆಯಲ್ಲಾಗಲಿ, ಬೈಬಲ್‌ನಲ್ಲಾಗಲಿ, ಖುರಾನ್‌ನಲ್ಲಾಗಲಿ ಇರುವ ವಾಕ್ಯಗಳಿಗೆ ದೇವರೇ ವಿವರ ಹೇಳಬೇಕಾಗಿದೆ. ದೇವರು ಹೇಳಿದ ಜ್ಞಾನವನ್ನು ದೇವರೇ ವಿವರಿಸಿ ಹೇಳುವವರೆಗೂ ಯಾವ ಮತದವರಿಗಾದರೂ ಅವರ

ಗ್ರಂಥದಲ್ಲಿನ ಅಂತರಾರ್ಥವು ತಿಳಿಯುದಿಲ್ಲ. ಈಗಿನಕಾಲದಲ್ಲಿ ಕೆಲವು ಮತಗಳಲ್ಲಿನ ಪಂಡಿತರು, ಸ್ವಾಮಿಗಳು ತಮ್ಮ ಗ್ರಂಥಗಳ ಜ್ಞಾನ ವಿವರವೆಲ್ಲವೂ ತಿಳಿದಿವೆಯೆಂದು ಹೇಳುತ್ತಿದ್ದರೂ, ನೇರವಾಗಿ ಕೇಳುವ ಪ್ರಶ್ನೆಗಳಿಗೆ ಉತ್ತರಗಳು ಹೇಳಲಾರದೆ ಗೊಂದಲದಲ್ಲಿದ್ದಾರೆ. ತಮ್ಮ ಲೋಪಗಳು ಹೊರಗೆ ಬೀಳದಂತೆ ತಕ್ಕ ಪ್ರಯತ್ನಗಳು ಮಾಡುತ್ತಿರುತ್ತಾರೆ. ಕೆಲವರು ತಮಗೆ ತಿಳಿದಿರುವುದೇ ಸತ್ಯವೆಂದು ಮೊಂಡಾಗಿ ವಾದಿಸುತ್ತಿರುತ್ತಾರೆ. ಎಲ್ಲ ಮತಗಳಲ್ಲಿಯೂ ಜ್ಞಾನಿಗಳಿದ್ದರೂ ಅವರದು ಸರಿಯಾದ ಜ್ಞಾನವಲ್ಲವೆಂದು ಅರ್ಥವಾಗಿದೆ. ಅಷ್ಟೇ ಅಲ್ಲದೆ ಎಲ್ಲ ಮತಗಳಲ್ಲಿಯೂ ಅಜ್ಞಾನವು ಅಂತಿಮಸ್ಥಿತಿಗೆ ಬೆಳೆದುಹೋಗಿ, ಮತದ್ವೇಷಗಳು ಹೆಚ್ಚಾಗಿವೆ, ಒಂದು ಮತದವರು ಮತ್ತೊಂದು ಮತದವರ ಮೇಲೆ ಭೌತಿಕ ದಾಳಿಗಳಿಗೆ ಬರುತ್ತಿದ್ದಾರೆ. ಒಬ್ಬರಿಗೊಬ್ಬರು ಪ್ರಾಣಾಂತಕವಾಗಿ ತಯಾರಾಗಿದ್ದಾರೆ. ಇಂತಹ ಪರಿಸ್ಥಿತಿ ಸ್ವಲ್ಪಕಾಲದಿಂದ ಮುಂದುವರೆಯುತ್ತಿದೆ.

ಪ್ರಪಂಚದಲ್ಲಿ ಎಷ್ಟು ಮತಗಳಿದ್ದರೂ ಎಲ್ಲದಕ್ಕಿಂತ ಮೊದಲಿನಿಂದಿರುವ ಮತವು ಇಂದೂ (ಹಿಂದೂ) ಮತ. ಇಂದೂ ಮತ ಎನ್ನುವುದು ಸೃಷ್ಟಿ ಆದಿಯಲ್ಲಿ ದೇವರು ಜ್ಞಾನವನ್ನು ಬೋಧಿಸಿದಾಗಿನಿಂದ ಏರ್ಪಟ್ಟಿದೆ. ಇಂದೂ ಮತ ಯಾವಾಗ ಹುಟ್ಟಿದೆಯೋ ಸ್ಪಷ್ಟವಾಗಿ ಹೇಳಲಾರೆವು. ಐದುಸಾವಿರ ವರ್ಷಗಳ ಪೂರ್ವದಲ್ಲಿ ದ್ವಾಪರಯುಗದ ಕೊನೆಯಲ್ಲಿ ಕೃಷ್ಣನು ದೇವರು ಆದಿಯಲ್ಲಿ ಹೇಳಿದ ಜ್ಞಾನವೇ ಹೇಳಿದ್ದಾನೆ. ಕೃಷ್ಣನು ಹೇಳಿದ ಗೀತಾಜ್ಞಾನವೇ ದೇವರು ಹೇಳಿದ ಜ್ಞಾನವಾಗಿತುವಾಗ, ಮಾಯೆ ಪ್ರಭಾವದಿಂದ ಕೆಲವರು ಮನುಷ್ಯರು ವ್ಯಾಸನು ಬರೆದ ವೇದಗಳೆ ಉತ್ತಮವಾದವುಗಳೆಂದು ಹೇಳುವುದು ನಡೆದಿದೆ. ಸ್ವಲ್ಪಕಾಲಕ್ಕೆ ಕೇರಳ ರಾಷ್ಟ್ರದಲ್ಲಿ ಹುಟ್ಟಿದ ಆದಿಶಂಕರಾಚಾರ್ಯರು ದೈವಜ್ಞಾನವನ್ನು ಅದ್ವೈತ ಸಿದ್ಧಾಂತ ರೂಪವಾಗಿ ಹೇಳುವುದು ನಡೆದಿದೆ. ನಂತರ ಸ್ವಲ್ಪಕಾಲಕ್ಕೆ ತಮಿಳುನಾಡು ರಾಷ್ಟ್ರದಲ್ಲಿ ಹುಟ್ಟಿದ ರಾಮಾನುಜಾಚಾರ್ಯರು ವಿಶಿಷ್ಟ ಅದ್ವೈತ (ವಿಶಿಷ್ಟಾದ್ವೈತ) ಸಿದ್ಧಾಂತವನ್ನು ಪ್ರತಿಪಾದಿಸಿ ಹೇಳುವುದು ನಡೆದಿದೆ. ಆ ಕಾಲದಲ್ಲಿ ಅದ್ವೈತದವರೂ, ವಿಶಿಷ್ಟಾದ್ವೈತದವರೂ ಒಬ್ಬರನ್ನೊಬ್ಬರು ನಮ್ಮದು ಉತ್ತಮ

ವಾದುದೆಂದು, ನಮ್ಮದು ಉತ್ತಮವೆಂದು ಘರ್ಷಣೆಯಾದಂತೆ ಚರಿತ್ರೆ ಇದೆ. ನಂತರ ಸ್ವಲ್ಪಕಾಲಕ್ಕೆ ಕರ್ನಾಟಕ ರಾಷ್ಟ್ರದಲ್ಲಿ ಹುಟ್ಟಿದ ಮಧ್ವಾಚಾರ್ಯರು ದ್ವೈತಸಿದ್ಧಾಂತವನ್ನು ಪ್ರತಿಪಾದಿಸಿದ್ದಾನೆ. ಆದಿಶಂಕರಾಚಾರ್ಯರು ಕೇವಲ 32 ವರ್ಷಗಳು ಮಾತ್ರ ಜೀವಿಸಿ, ಚಿಕ್ಕವಯಸ್ಸಿನಲ್ಲಿಯೇ ಅದ್ವೈತವನ್ನು ಪ್ರಚಾರ ಮಾಡಿರುವಾಗ, ನಂತರ 197 ವರ್ಷಗಳ ನಂತರ ಬಂದ ರಾಮಾನುಜಾ ಚಾರ್ಯರು 120 ವರ್ಷಗಳು ಬದುಕಿ, ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡಿದ್ದಾನೆ. ನಂತರ 100 ವರ್ಷಗಳ ನಂತರ ಬಂದಿರುವ ಮಧ್ವಾಚಾರ್ಯರು 79 ವರ್ಷಗಳು ಬದುಕಿ ತನ್ನ ದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡಿದ್ದಾನೆ. ಮಧ್ವಾಚಾರ್ಯರ ನಂತರ 633 ವರ್ಷಗಳಿಗೆ (1950) ಆಚಾರ್ಯ ಪ್ರಬೋಧಾ ನಂದ ಯೋಗೀಶ್ವರರು ಜನ್ಮಿಸಿ 27 ವರ್ಷಗಳ ವಯಸ್ಸಿನಿಂದ ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿ ಪ್ರಚಾರ ಮಾಡಿದ್ದಾರೆ. ಈ ವಿಧವಾಗಿ ಇಂದೂ(ಹಿಂದೂ) ಮತದಲ್ಲಿ ನಾಲ್ವರು ಆಚಾರ್ಯರು ದೈವಜ್ಞಾನವನ್ನು ಅವರವರ ಸಿದ್ಧಾಂತಗಳನ್ನು ಆಧಾರ ಮಾಡಿಕೊಂಡು ಬೋಧಿಸಿದ್ದಾರೆ.

ಮುಖ್ಯ ವಿಷಯವೇನೆಂದರೆ! ಶಂಕರಾಚಾರ್ಯ, ರಾಮಾನುಜಾ ಚಾರ್ಯ, ಮಧ್ವಾಚಾರ್ಯರ ಸಿದ್ಧಾಂತಗಳು ತಿಳಿದಿವೆ, ಆದರೆ ಅವರ ವ್ಯಕ್ತಿಗತ ಜೀವನಗಳು ನನಗೆ ತಿಳಿದಿಲ್ಲ. ಆದರೆ ಕೊನೆಯ ಸಿದ್ಧಾಂತಕರ್ತನಾದ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರೊಬ್ಬರ ಜೀವನವು ಪೂರ್ತಿಯಾಗಿ ನನಗೆ ತಿಳಿದಿದೆ. ಏಕೆಂದರೆ ಪ್ರಬೋಧಾನಂದ ಯೋಗೀಶ್ವರರು ಎನ್ನುವ ವ್ಯಕ್ತಿ ನನಗೆ ಚೆನ್ನಾಗಿ ತಿಳಿದಿದ್ದಾರೆ ಆದ್ದರಿಂದ ಇಲ್ಲಿಯವರೆಗೂ ಏನು ನಡೆದಿರುವುದು ಎಲ್ಲ ತಿಳಿದಿದೆ. ನನಗೆ ತಿಳಿದು ಪ್ರಬೋಧಾನಂದ ಯೋಗೀಶ್ವರರು ಸರ್ವಸಾಧಾರಣ ಮನುಷ್ಯ, ಹೊರಗೆ ಕಾಣಿಸುವ ಯಾವ ಪ್ರತ್ಯೇಕತೆ ಆತನಲ್ಲಿ ಇಲ್ಲ. ಆದರೆ ಆತನು ಶರೀರದಲ್ಲಿ ವಾಸಿಸುವ ಆತ್ಮ ಏನೋ ಪ್ರತ್ಯೇಕವಾದುದೆಂದು ಹೇಳಬಹುದು. ಒಂದು ಕಡೆ ಆತನಿಗೆ ತನ್ನ ಆತ್ಮ ಮಹತ್ವವಾದುದೆಂದು ಅನಿಸಿದರೂ ಮತ್ತೊಂದು ಕಡೆ ಅದು ನನ್ನ ಭ್ರಮೆ ಎಂದುಕೊಳ್ಳುವನು. ಆತನ

ಆತ್ಮ ಉತ್ತಮವಾದುದಾದರೆ ಆತನ ಜೀವನ ಸಾಮಾನ್ಯ (ಸಗಟು) ಮನುಷ್ಯನಿಗಿಂತ ಹೀನವಾಗಿ ಏಕೆ ಆರಂಭವಾಗಿದೆ? ಆತನು ಏಕೆ ಆರ್ಥಿಕ ತೊಂದರೆಗಳ ಪಾಲಾಗಿದ್ದಾನೆ? ಯಾರೂ ಆತನಿಗೆ ಬೆಲೆ ಕೊಡದೆ ಅವಹೇಳನವಾಗಿ ಏಕೆ ನೋಡುತ್ತಿದ್ದರು? ಸಮಾಜದಲ್ಲಿ ಯಾವ ಗುರುತು ಇಲ್ಲದ ಪೂರ್ತಿ ಅಜ್ಞಾನಿಗಳಾದ ತಾಯಿತಂದೆಗೆ ಏಕೆ ಹುಟ್ಟಿದ್ದಾನೆ? ಮುಖ್ಯವಾಗಿ ಆತನ ತಾಯಿಯೇ ಆತನನ್ನು ಕುರಿತು ಕೆಟ್ಟದಾಗಿ ಏಕೆ ಹೇಳುತ್ತಿದ್ದಳು? ಆತನ ಸಂಬಂಧಿಕರು ಯಾರೊಂದಿಗೂ ಆತನಿಗೆ ಏಕೆ ಸಂಬಂಧವಿಲ್ಲ? ಆತನನ್ನು ಆತನ ಸಂಬಂಧಿಕರು ಹೀನವಾಗಿ, ಕೀಳು ಭಾವನೆಯಿಂದ ಏಕೆ ಮಾತನಾಡುತ್ತಿದ್ದರು? ಯುಕ್ತವಯಸ್ಸಿನಲ್ಲಿ ಆತನಿಗೆ ಹುಡುಗಿಯನ್ನು ಕೊಡುವುದಕ್ಕೆ ಆತನ ಕುಲದವರು ಏಕೆ ಹಿಂಜರಿಯುತ್ತಿದ್ದರು? ಕೊನೆಗೆ ತಿಳುವಳಿಕೆಯಿಲ್ಲದ ಹುಡುಗಿ ಮತ್ತು ಮೂರ್ಚೆರೋಗವಿರುವ ಹುಡುಗಿಯನ್ನು ಏಕೆ ವಿವಾಹವಾಗಬೇಕಾಗಿ ಬಂದಿದೆ? ಅಂತಹ ಪತ್ನಿಯೂ ಸಹ ಆತನಿಗೆ ಸ್ವಲ್ಪವೂ ಸಹ ಬೆಲೆಕೊಡದಂತೆ ಮಾತನಾಡುತ್ತಾ ಆತನನ್ನು ಬಿಟ್ಟು ಏಕೆ ಹೋಗಿದ್ದಾಳೆ? ತನ್ನ ಕುಲವಲ್ಲದ ಹುಡುಗಿಯನ್ನು ಆತನು ಎರಡನೇ ಹೆಂಡತಿಯಾಗಿ ಮಾಡಿಕೊಳ್ಳುವುದೇನು? ಇಂದಿಗೂ ತಾಯಿ ಕಡೆಯ ಸಂಬಂಧಿಕರಾಗಲಿ, ತಂದೆ ಕಡೆಯ ಸಂಬಂಧಿಕರಾಗಲಿ, ಹೆಂಡತಿ ಕಡೆಯ ಸಂಬಂಧಿಕರಾಗಲಿ ಆತನಜೊತೆ ಏಕೆ ಸಂಬಂಧ ಇಟ್ಟುಕೊಂಡಿಲ್ಲ? ಆತನ ಹತ್ತಿರಕ್ಕೆ ಯಾವ ಸಂಬಂಧಿಯೂ ಏಕೆ ಬರುತ್ತಿಲ್ಲ? ಹೀಗೆ ಪ್ರಶ್ನಿಸಿಕೊಂಡರೆ ಎಷ್ಟೋ ಪ್ರಶ್ನೆಗಳು ಬರುತ್ತವೆ. ಇಷ್ಟು ಪ್ರಶ್ನೆಗಳನ್ನು ನೋಡಿದ ನಂತರ ಆತನನ್ನು ಯಾರೂ ಸಮರ್ಥಿಸುವುದಿಲ್ಲ, ಶುದ್ಧ ಕೆಲಸಕ್ಕೆ ಬಾರದವನ ಕೆಳಗೆ ಜಮಕಟ್ಟುತ್ತಾರೆ. ಇದೆಲ್ಲವೂ ಒಂದುಕಡೆಯಿಂದ ನೋಡಿದರೆ ಆತನು ಸಕ್ರಮವಾದ ಮನುಷ್ಯನಲ್ಲ ಎಂದು ಯಾರಾದರು ಹೇಳುತ್ತಾರೆ.

ಮತ್ತೊಂದುಕಡೆಯಿಂದ ಇರುವ ವಾಸ್ತವಿಕತೆಯನ್ನು ನೋಡಿದರೆ ಆತನಲ್ಲಿ ಯಾವ ಲೋಪವು ಇಲ್ಲ. ಆತನು ಹುಟ್ಟಿರುವುದು ಯಾವ ಗುರುತು

ಇಲ್ಲದ ಅಜ್ಞಾನಿಗಳಿಗೆ, ಅಷ್ಟೇ ಅಲ್ಲದೆ ತಾಯಿದೊಂದು ದಾರಿ, ತಂದೆದೊಂದು ದಾರಿಯಾಗಿ ಬದುಕುತ್ತಿದ್ದರು. ತಂದೆತಾಯಿಯರು ತಿಂಡಿಗೋಸ್ಕರವೇ ಬದುಕುವುದೆನ್ನುವಂತೆ ಸ್ವಲ್ಪವೂ ಸಹ ಮುಂದಿನ ದೃಷ್ಟಿ ಇಲ್ಲದಂತೆ ತಿಂಡಿಗೆ ಹೆಚ್ಚಾಗಿ ಪ್ರಾಧಾನ್ಯತೆ ಕೊಡುತ್ತಿದ್ದರು. ಅಂತಹ ಪರಿಸ್ಥಿತಿಯಲ್ಲಿ ಆತನಿಗೆ ಯುಕ್ತವಯಸ್ಸು ಬರುವಷ್ಟರಲ್ಲಿ ಸ್ವಲ್ಪವೂ ಸಹ ಆಸ್ತಿಯಿಲ್ಲದಿರುವುದರಿಂದ ಸಮಾಜದಲ್ಲಿ ಗೌರವ ಇಲ್ಲದ ಸ್ಥಿತಿ ಏರ್ಪಟ್ಟಿದೆ. ತಂದೆತಾಯಿಯರು ದೊಡ್ಡಮ್ಮ (ಪೆದ್ದಮ್ಮ) ಎನ್ನುವ ಗ್ರಾಮದೇವತೆಯನ್ನು ಮನೆ ದೇವತೆಯಾಗಿ ಪೂಜಿಸುತ್ತಿದ್ದರು. ಆದ್ದರಿಂದ ಅದೇ ಹೆಸರನ್ನೆ ಹುಟ್ಟಿದ ಮಕ್ಕಳಿಗೆ ಇಡುತ್ತಿದ್ದರು. ಆ ಪದ್ಧತಿಯಲ್ಲಿಯೇ ಈದಿನ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರಾಗಿ ಇರುವ ಆತನು ಎಲ್ಲರಿಂದ ಪೆದ್ದನ್ನನಾಗಿ ಕರೆಯಲ್ಪಡುತ್ತಿದ್ದನು. ಹದಿನಾರನೆ ವರ್ಷಗಳ ವಯಸ್ಸಿನಲ್ಲಿಯೇ ತಾಯಿತಂದೆಯರು ಬೇರೆಯಾಗುವುದರಿಂದ ತಾಯಿಯನ್ನು ಪೋಷಿಸುವ ಜವಾಬ್ದಾರಿ ಆತನ ಮೇಲೆ ಬಿದ್ದಿದೆ. ತಾಯಿಯನ್ನು ಪೋಷಿಸುತ್ತಾ 1969 ಮೇ ತಿಂಗಳಿಗೆ ಎಸ್.ಎಸ್.ಎಲ್.ಸಿ (ಹನ್ನೊಂದನೆಯ ತರಗತಿ) ಯನ್ನು ಪೂರ್ತಿ ಮಾಡಿ, ಅದೇ ವರ್ಷ ಬದುಕನ್ನು ಸಾಗಿಸುವ ಕಾರಣ ಮಿಲಿಟರಿಯಲ್ಲಿ ಒಂದು ಭಾಗವಾದ ಆರ್ಮೀಯಲ್ಲಿ ಸೇರಿ ಸುಮಾರು ಮೂರು ವರ್ಷಗಳು ಅದರಲ್ಲಿ ಮಾಡಿದ್ದಾನೆ. ಹೊಟ್ಟೆಪಾಡಿಗಾಗಿ ಆರ್ಮೀಯಲ್ಲಿ ಕೆಲಸ ಮಾಡುತ್ತಿದ್ದರೂ ಅಲ್ಲಿ ಆಫೀಸರ್‌ಗಳೊಂದಿಗೆ ಸಮಾನವಾಗಿ ಆಫೀಸ್‌ನಲ್ಲಿ ಕೆಲಸ ಇರುತ್ತಿತ್ತು. ಅಲ್ಲಿ ಆಫಿಸರ್ಸ್ ಎಲ್ಲರೂ ಎಷ್ಟೋ ಪರಿಚಯವಾಗಿ ಇರುತ್ತಿದ್ದರು. ಅಂತಹ ಸ್ಥಿತಿಯಲ್ಲಿ ಪೆದ್ದನ್ನ ಎನ್ನುವ ಆತನು ಆಗಾಗ ದೈವಜ್ಞಾನವನ್ನು ಕುರಿತು ಅಲ್ಲಿನ ಅಧಿಕಾರಿಗಳಿಗೆ ಸಮಯವು ದೊರೆತಾಗಲೆಲ್ಲ ಹೇಳುತ್ತಿದ್ದನು. ಆ ಸಂದರ್ಭದಲ್ಲಿ ಈ ಉದ್ಯೋಗ ನನಗೆ ಸರಿಹೋಗುವುದಿಲ್ಲ, ನಾನು ಹೊರಗಿನ ಮನುಷ್ಯರಲ್ಲಿದ್ದು ಅವರಿಗೆ ಎಷ್ಟೋ ಜ್ಞಾನ ಹೇಳಬೇಕಾಗಿದೆ ಎಂದು ಹೇಳುತ್ತಿದ್ದನು. ಆ ರೆಜಿಮೇಂಟ್‌ನಲ್ಲಿರುವ ಅಧಿಕಾರಿಗಳು ಆ ಮಾತಿಗೆ ಸ್ಪಂದಿಸಿ ಆತನನ್ನು ಆರ್ಮಿಯಿಂದ ಹೊರಗೆ ಕಳುಹಿಸುವುದು ನಡೆದಿದೆ.

ಉದ್ಯೋಗ ಬಿಟ್ಟು ಹೊರಗೆ ಹೋದರೆ ಹೇಗೆ ಬದುಕುತ್ತೀಯಾ ಎನ್ನುವ ಪ್ರಶ್ನೆ ಒಂದು ಕಡೆ ಕಾಡುತ್ತಿದ್ದರೂ, ಅದಕ್ಕೆ ಸಮಾಧಾನವನ್ನು ಹುಡುಕದೆಯೇ ಉದ್ಯೋಗದಿಂದ ಹೊರಗೆ ಬಂದು ಎಷ್ಟೋ ಶ್ರಮಪಡಬೇಕಾಗಿ ಬಂದಿದೆ. ಕರ್ನಾಟಕದಲ್ಲಿ ಒಂದು ವರ್ಷ ಕಾಲ ವ್ಯವಸಾಯ ಮಾಡಬೇಕಾಗಿ ಬಂದಿದೆ. ನಂತರ ತಪ್ಪದೆ ಪ್ರವೇಟ್ ಕಂಪನಿಯಲ್ಲಿ ಗುಮಾಸ್ತ ಉದ್ಯೋಗವನ್ನು ಮಾಡಬೇಕಾಗಿ ಬಂದಿದೆ. ಮನಸ್ಸಿಗೆ ಇಷ್ಟವಾಗದ ಕೆಲಸ ಆಗಿರುವುದರಿಂದ ಅದನ್ನು ಸಹ ಆರು ತಿಂಗಳಿಗೇ ಬಿಡುವುದು ನಡೆದಿದೆ. ನಂತರ ಒಂದುಕಡೆ ತಾಯಿಯನ್ನು ಪೋಷಿಸುತ್ತಾ, ವೈದ್ಯ ವೃತ್ತಿಯನ್ನು ಮಾಡುತ್ತಾ ಪ್ರಜೆಗಳೊಂದಿಗೆ ಸಂಬಂಧ ಏರ್ಪಡಿಸಿಕೊಂಡು ಬಂದುಹೋಗುವವರಿಗೆ ಸ್ವಲ್ಪ ಜ್ಞಾನವನ್ನು ಹೇಳುತ್ತಿದ್ದನು. ಆತನ ಹತ್ತಿರ ಎಷ್ಟು ದೊಡ್ಡ ರೋಗಗಳಾದರೂ ಸುಲಭವಾಗಿ ವಾಸಿಯಾಗುತ್ತಿದ್ದವು. ವೈದ್ಯವೃತ್ತಿಯಿಂದ ಅಷ್ಟೋ ಇಷ್ಟೋ ಹಣ ಬರುತ್ತಿತ್ತು, ಆ ಸಂದರ್ಭದಲ್ಲಿ ಬಂದವರಿಗೆ ರೋಗಗಳು ಕರ್ಮಗಳನ್ನನುಸರಿಸಿ ಬರುತ್ತವೆಂದು ಜ್ಞಾನವನ್ನು ಹೇಳುವುದಕ್ಕೆ ಅವಕಾಶ ಇರುತ್ತಿತ್ತು. ತನಗೆ ಎಷ್ಟು ಆರ್ಥಿಕ ತೊಂದರೆಗಳು ಬಂದರೂ ಜೀವನ ಮಾತ್ರ ಸುಖವಾಗಿ ಸಾಗುತ್ತಿತ್ತು. ಆತನು ಎಷ್ಟು ಸುಖವಾಗಿ ಬದುಕಿದರೂ, ಎಷ್ಟು ತಿಳುವಳಿಕೆಯುಳ್ಳವನಾದರೂ ಆತನ ಸಂಬಂಧಿಕರು ಆತನನ್ನು ಆಸ್ತಿಯಿಲ್ಲದವನೆಂದು ಕೀಳಾಗಿ ನೋಡುತ್ತಿದ್ದರು. ಒಂದು ವಿಧವಾಗಿ ಸಮಾಜದಲ್ಲಿ ಆಸ್ತಿಯಿಲ್ಲದವನಾದರೂ ಧೈರ್ಯವಾಗಿ ಬದುಕುತ್ತಿದ್ದನು. ಎಲ್ಲಿಯು ಕಲಿಯದೆಯೇ ಆತನಿಗೆ ವೈದ್ಯ, ಜ್ಯೋತಿಷ್ಯ ಬರುತ್ತಿದ್ದವು. ಅವುಗಳಿಂದ ಪ್ರಜೆಗಳ ಸಂಬಂಧ ಏರ್ಪಡಿಸಿಕೊಂಡು ಎಷ್ಟೊ ಚಿಕಿತ್ಸೆಗಳನ್ನು ಮಾಡುವುದು ನಡೆದಿದೆ. ಆತನಿಗೆ ನಾನು ಏನು ತಿಳಿಯದವನು ಅಲ್ಲವೆ! ಎಂದು ಒಂದು ಕಡೆ ಅನಿಸುತ್ತಿದ್ದರೂ, ಒಂದುಕಡೆ ಎಲ್ಲ ತಿಳಿದವನಾಗಿ ಆಗಿಂದಾಗ್ಗೆ ಬಂದಿರುವ ಯೋಚನೆ ಪ್ರಕಾರ ಚಿಕಿತ್ಸೆ ಮಾಡುತ್ತಿದ್ದೆನು. ಅದರಿಂದ ಎಲ್ಲಿಯೂ ವಾಸಿಯಾಗದ ರೋಗಗಳು ವಾಸಿಯಾಗಿ ಹೋಗುತ್ತಿದ್ದವು. ಹಾಗೆಯೇ ಯಾರಾದರು ಜ್ಯೋತಿಷ್ಯದ ಬಗ್ಗೆ ಕೇಳಿದರೆ ತಾನು ಏನು ಹೇಳಿದರೆ ಅದೇ ನಡೆಯುತ್ತಿತ್ತು. ಹೀಗೆ ಕಡಿಮೆ ಕಾಲದಲ್ಲಿಯೇ ಹೆಚ್ಚಾಗಿ ಹೆಸರು ಪ್ರಖ್ಯಾತಿಗಳು ಬಂದಿವೆ. ಇದು ಬದುಕುವು

ದಕ್ಕಾಗಿಯೇ ಆದರೂ ತನಗೆ ಆ ಕೆಲಸ ಇಷ್ಟವಾಗದೆ ತಾನು ಆ ವೃತ್ತಿಯನ್ನು ಮಾಡದಂತೆ ಇತರರಿಂದ ಮಾಡಿಸುತ್ತಿದ್ದನು. ಆ ಸಮಯದಲ್ಲಿಯೇ ಪ್ರಬೋಧ ಎಂಬ ಗ್ರಂಥವನ್ನು ಬರೆದು ತನಗೆ ಪರಿಚಯವಿರುವ ಒಂದು ಆಶ್ರಮದಲ್ಲಿನ ಸ್ವಾಮೀಜಿಗೆ ತೋರಿಸುವುದು ನಡೆದಿದೆ. ಆ ಸ್ವಾಮೀಜಿ ಅದನ್ನು ನೋಡಿ ಆಶ್ಚರ್ಯಪಟ್ಟು ಇಂತಹ ಜ್ಞಾನ ಇರುವವನಿಗೆ ಗುರುವು ತಪ್ಪದೆ ಇರಬೇಕು, ನಾನು ಉಪದೇಶಕೊಡುತ್ತಿದ್ದೇನೆ ತೆಗೆದುಕೋ ಅಂದನು ಆ ಸ್ವಾಮಿಯವರು ಒಂದು ಮಂತ್ರವನ್ನು ಹೇಳಿ ಅದೇ ಉಪದೇಶ ಅಂದರು. ಅಷ್ಟೇ ಅಲ್ಲದೆ ನಿನಗೊಂದು ಹೆಸರನ್ನು ಇಡುತ್ತೇನೆಂದು ಹೇಳಿ, ಪ್ರಬೋಧಾನಂದಾ ಎಂದು ಹೇಳುವುದು ನಡೆದಿದೆ. ತಾಯಿತಂದೆಯರು ಇಟ್ಟಿರುವ ಹೆಸರು ಪೆದ್ದನ್ನ ಆದರೆ ಆಧ್ಯಾತ್ಮಿಕದಲ್ಲಿ ಗುರುವು ಇಟ್ಟಿರುವ ಹೆಸರಾಗಿ ಈ ಹೆಸರನ್ನು ಇಟ್ಟುಕೋ ಎಂದು ಹೇಳುವುದು ನಡೆದಿದೆ.

ಅಂದಿನಿಂದ ಪೆದ್ದನ್ನ ಎಂಬ ಹೆಸರು ಪೂರ್ತಿಯಾಗಿ ಇಲ್ಲದಂತೆ ಹೋಗಿದೆ. ಪ್ರಪಂಚ ವ್ಯವಹಾರಗಳಲ್ಲಿ ಗುತ್ತಾ ಪ್ರಬೋಧಾನಂದ ಚೌದರಿಯಾಗಿ ವ್ಯವಹರಿಸಿದರೆ ಆಧ್ಯಾತ್ಮಿಕ ವಿದ್ಯೆಯಲ್ಲಿ ಪ್ರಬೋಧಾನಂದನಾಗಿ ಪ್ರಾರಂಭವಾದ ನಂತರ ಸ್ವಲ್ಪ ಕಾಲಕ್ಕೆ ಪ್ರಬೋಧಾನಂದ ಯೋಗೀಶ್ವರರಾಗಿ ಹೇಳಲಾಗಿದೆ. ಒಬ್ಬ ಸ್ವಾಮಿ ಹತ್ತಿರ ಮಂತ್ರೋಪದೇಶವನ್ನು ತೆಗೆದುಕೊಂಡರೂ, ಆ ಮಂತ್ರವನ್ನು ಆತನು ಎಂದಿಗೂ ಜಪಿಸಲಿಲ್ಲ. ಮಂತ್ರಗಳು ಉಪದೇಶಗಳಲ್ಲ ಎಂದು ಮೊದಲಿನಿಂದ ಹೇಳುತ್ತಿರುವ ಆತನು ಗುರುವು ಇಟ್ಟ ಹೆಸರನ್ನು ತೆಗೆದು ಕೊಂಡಿದ್ದಾನಾಗಲಿ, ಮಂತ್ರವನ್ನು ತೆಗೆದುಕೊಳ್ಳಲಿಲ್ಲ. ಆತನ ವೈದ್ಯ ವೃತ್ತಿ ಮೂಲಕ ಪ್ರಜೆಗಳಲ್ಲಿ ಸ್ವಲ್ಪ ಹೆಸರನ್ನು ಸಂಪಾದಿಸಿಕೊಂಡರೂ ಸಾಟಿ ಕುಲಗಳಲ್ಲಾಗಲಿ, ಸಾಟಿ ಸಂಬಂಧಿಕರಲ್ಲಾಗಲಿ ಸ್ವಲ್ಪವೂ ಸಹ ಗುರುತು ಇಲ್ಲದಂತೆ ಇತ್ತು. ತನ್ನ 25 ವರ್ಷದಿಂದ ವೈದ್ಯವೃತ್ತಿಯನ್ನು ಮಾಡುವುದಾಗಲಿ, ಜ್ಯೋತಿಷ್ಯವನ್ನು ಹೇಳುವುದಾಗಲಿ ಮಾಡಲಿಲ್ಲ. ಒಂದೇ ಒಂದು ದೈವಜ್ಞಾನವನ್ನು ಬಿಟ್ಟರೆ ಏನನ್ನು ಹೇಳುವುದಿಲ್ಲವೆಂದು ಅಂದುಕೊಂಡಿದ್ದಾನೆ. ಅಂದಿನಿಂದ ಯಾರಿಗಾದರು

ಪ್ರಾಣಾಪಾಯಸ್ಥಿತಿಯಲ್ಲಿ ವೈದ್ಯ ಸಲಹೆಯನ್ನು ಹೇಳಿದ್ದಾನಾಗಲಿ, ಚಿಕಿತ್ಸೆ ಮಾಡಲಿಲ್ಲ. ಹಾಗೆಯೇ ಜ್ಯೋತಿಷ್ಯ ತಿಳಿದರೂ ಯಾರಿಗೂ ಹೇಳಲಿಲ್ಲ. ತನಗೆ ಎಷ್ಟೋ ವಿದ್ಯೆಗಳು ತಿಳಿದರೂ ಯಾವ ವಿದ್ಯೆಯನ್ನು ಬಳಸಿಕೊಳ್ಳದೆ ಸರ್ವ ಸಾಧಾರಣವಾಗಿ ಬದುಕುತ್ತಾ ಯಾರಿಂದಲೂ ಹಣವನ್ನು ಆಶಿಸದೆ, ಜ್ಞಾನವನ್ನು ಗ್ರಂಥರೂಪದಲ್ಲಿ ಬರೆಯುತ್ತಾ ತನಗೆ ತಿಳಿದ ವ್ಯಾಪಾರಗಳನ್ನು ಮಾಡುತ್ತಾ ಮಾಡಿಸುತ್ತಾ ಕಾಲವನ್ನು ಸಾಗಿಸುತ್ತಿದ್ದನು. ಮನುಷ್ಯರಲ್ಲಿ ಸಾಮಾನ್ಯ ಮನುಷ್ಯನಾಗಿ, ಯಾವ ಗುರುತು ಇಲ್ಲದಂತೆ ಬದುಕುತ್ತಾ ಆತನು ಬರೆದ ಗ್ರಂಥಗಳಲ್ಲಿ ಕೆಲವು ಸಂದರ್ಭಗಳಲ್ಲಿ ಪ್ರಬೋಧಾನಂದ ಯೋಗೀಶ್ವರರಾಗಿ ತನ್ನ ಹೆಸರನ್ನು ಬರೆಯುವುದು ನಡೆದಿದೆ. ಸ್ವಲ್ಪಕಾಲಕ್ಕೆ ಭಗವದ್ಗೀತೆ ಗ್ರಂಥವನ್ನು ಬರೆಯುವಾಗ ತನ್ನ ಹೆಸರಿನ ಮುಂದೆ **"ತ್ರೈತ ಸಿದ್ಧಾಂತ ಆದಿಕರ್ತ"**ಎಂದು ಬರೆಯಲಾಗಿದೆ. ಅದ್ವೈತ ಸಿದ್ಧಾಂತವನ್ನು ಆದಿಶಂಕರಾಚಾರ್ಯನು ಪ್ರಕಟಿಸಿದಂತೆ, ರಾಮಾನುಜಾ ಚಾರ್ಯರು ವಿಶಿಷ್ಠಾದ್ವೈತ ಸಿದ್ಧಾಂತವನ್ನು ಪ್ರಕಟಿಸಿದಂತೆ, ಮಧ್ವಾಚಾರ್ಯರು ದ್ವೈತ ಸಿದ್ಧಾಂತವನ್ನು ಪ್ರಕಟಿಸಿದಂತೆ, ಪ್ರಬೋಧಾನಂದ ಯೋಗೀಶ್ವರರು ತ್ರೈತ ಸಿದ್ಧಾಂತವನ್ನು ಪ್ರಕಟಿಸಿದ್ದಾನೆ. ತ್ರೈತ ಸಿದ್ಧಾಂತವನ್ನು ಆಧಾರ ಮಾಡಿಕೊಂಡು ಭಗವದ್ಗೀತೆಯನ್ನು ತ್ರೈತ ಸಿದ್ಧಾಂತ ಭಗವದ್ಗೀತೆಯಾಗಿ ಬರೆಯುವುದು ನಡೆದಿದೆ.

ಸಾಧಾರಣ ಮನುಷ್ಯನಾಗಿ ಜೀವನವನ್ನು ಸಾಗಿಸುವ ಪ್ರಬೋಧಾನಂದ ಸಮಾಜದಲ್ಲಿ ಸಾಮಾನ್ಯ ಮನುಷ್ಯರಲ್ಲಿ ಯಾವ ಗುರುತು ಇಲ್ಲದಂತೆ ಬದುಕುತ್ತಿದ್ದನು. ಆದ್ದರಿಂದ ಸಾಮಾನ್ಯ ಮನುಷ್ಯರು ಆತನನ್ನು ಸರ್ವ ಸಾಧಾರಣವಾಗಿ ನೋಡಿದರೂ, ಕಾಣಿಸದ ದೆವ್ವಗಳು, ದೇವತೆಗಳು ಆತನನ್ನು ದೊಡ್ಡದಾಗಿ ನೋಡುತ್ತಿದ್ದವು. ಆತನ ಮಾತನ್ನು ಗೌರವಿಸುತ್ತಿದ್ದವು. ತ್ರೈತಸಿದ್ಧಾಂತ ಭಗವದ್ಗೀತೆ ಆತನ ಐದನೆ ರಚನೆಯಾಗಿ ಬಂದಿದೆ. ಆಸಮಯಕ್ಕಾಗಲೆ ಆತನ ಫೋಟೋ ಮುಂದೆ ಕುಳಿತುಕೊಂಡವರಿಗೆ ಕೆಲವು ವಿಧಗಳ ರೋಗಗಳು ಹೋಗುತ್ತಿದ್ದವು. ಇತರರೊಳಗೆ ಸೂಕ್ಷ್ಮವಾಗಿ ಬಂದ ದೇವತೆಗಳು ಸಹಿತವು ಆತನಿಗೆ ನಮಸ್ಕರಿಸಿ ಮಾತನಾಡುತ್ತಿದ್ದರು. ಹೇಳಿದಮಾತು ಕೇಳುತ್ತಿದ್ದರು. ಹೊರಗೆ

ಇದೊಂದು ವಿಚಿತ್ರವಾಗಿದ್ದರೂ ಪ್ರಬೋಧಾನಂದ ಮಾತ್ರ ತನ್ನನ್ನು ಸಾಧಾರಣ ಮನುಷ್ಯನಾಗಿಯೆ ಲೆಕ್ಕಿಸಿಕೊಳ್ಳುತ್ತಿದ್ದನು. ಆತನು ಮುಖ್ಯವಾಗಿ ಒಂದು ಮಾತನ್ನು ಹೇಳುತ್ತಿದ್ದನು. ಅದೇನೆಂದರೆ "ನಾನು ಹೇಳುವುದು ಭೂಮಿಮೇಲೆ ಇಲ್ಲಿಯ ವರೆಗೂ ಯಾರು ಹೇಳದಿರುವುದಾಗಿರುತ್ತದೆ. ಹಾಗೆಯೇ ನಾನು ಬರೆಯುವುದು ಇಲ್ಲಿಯವರೆಗೂ ಭೂಮಿಮೇಲೆ ಯಾರು ಬರೆಯದಿರುವುದು ಆಗಿರುತ್ತದೆ." ನಿಜವಾಗಲೂ ಆತನು ಹೇಳುವ ಜ್ಞಾನವಾಗಲಿ, ಬರೆಯುವ ಬರಹವಾಗಲಿ ಯಾರಿಂದಲೂ ತಿಳಿಯದಿರುವುದಾಗಿರುತ್ತದೆ. ಇದನ್ನು ಇಂತಹ ರಹಸ್ಯವನ್ನು ನೀವು ಹೇಗೆ ಹೇಳುತ್ತಿದ್ದೀರೆಂದು ಯಾರಾದರು ಕೇಳಿದರೆ, ಬರೆಯುವುದಾಗಲಿ, ಹೇಳುವುದಾಗಲಿ ನಾನು ಅಲ್ಲ. ನನಗೆ ಜೊತೆಯಾಗಿರುವ ಆತ್ಮ ಎಂದು ಹೇಳುತ್ತಿದ್ದನು. ಎಲ್ಲಾ ಕೆಲಸಗಳು ಆತ್ಮವೇ ಮಾಡುತ್ತಿದೆಯೆಂದು ಎಲ್ಲರಿಗೂ ಹೇಳುತ್ತಿದ್ದನು.

ತ್ರೈತ ಸಿದ್ಧಾಂತ ಆದಿಕರ್ತ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು ಎಂಬ ಹೆಸರಿನಿಂದ ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದ ನಂತರ ಆಧ್ಯಾತ್ಮಿಕ ವಿದ್ಯೆಯಲ್ಲಿ ಎಷ್ಟೋ ರಹಸ್ಯಗಳನ್ನು ಬಹಳ ಗ್ರಂಥಗಳ ರೂಪದಲ್ಲಿ ಬರೆಯುವುದು ನಡೆದಿದೆ. ಗ್ರಂಥಗಳನ್ನು ಓದಿದವರು ಎಲ್ಲರೂ ಇವು ಬಹಳ ಉತ್ತಮ ಗ್ರಂಥಗಳೆಂದು, ಇಲ್ಲಿಯವರೆಗೂ ನಮಗೆ ತಿಳಿಯದ ಜ್ಞಾನವು ತಿಳಿದಿದೆ ಎಂದು ಹೇಳುತ್ತಿದ್ದರು. ಓದದವರು ತ್ರೈತ ಸಿದ್ಧಾಂತ ಎನ್ನುತ್ತಲೇ ಇದೇನೋ ಕ್ರೈಸ್ತರಿಗೆ ಸಂಬಂಧಿಸಿರುವುದೆಂದು ಅಸೂಯೆಯಿಂದ ನೋಡುವು ದಲ್ಲದೆ, ಪ್ರಬೋಧಾನಂದ ಯೋಗೀಶ್ವರರನ್ನು ಕ್ರೈಸ್ತರ ಬೋಧನೆ ಮಾಡುತ್ತಿದ್ದೀಯಾ ಎಂದು ನಿಂದಿಸುತ್ತಿದ್ದರು. ಇನ್ನೂ ಕೆಲವರು ಹಿಂದೂಗಳ ಮುಸುಗಿನಲ್ಲಿ ಕ್ರೈಸ್ತ ಮತವನ್ನು ಪ್ರಚಾರ ಮಾಡುತ್ತಿದ್ದಾರೆಂದು ಆರೋಪಿಸುತ್ತಿದ್ದರು. ವಿಶ್ವಹಿಂದೂ ಪರಿಷತ್‌ನಂತಹ ಹಿಂದೂಮತ ಸಂಸ್ಥೆಗಳ ಮನುಷ್ಯರು ಬಹಳ ಸಲ ಪ್ರಬೋಧಾನಂದ ಶಿಷ್ಯರ ಮೇಲೆ ದಾಳಿಮಾಡುವುದು ಸಹ ನಡೆದಿದೆ. ಈ ಗ್ರಂಥಗಳು ಯಾವುದಕ್ಕೆ ಸಂಬಂಧಿಸಿರುವವೆಂದು ನೋಡದೆಯೆ ಭಗವದ್ಗೀತೆ

ಎಂಬ ಹೆಸರಿರುವ ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಸಹ ಬೆಂಕಿ ಇಟ್ಟು ಸುಡುವುದು ನಡೆದಿದೆ. ಇಂತಹ ಚರ್ಯಗಳನ್ನು ನೋಡಿದ ಪ್ರಬೋಧಾನಂದ "ನಾನು ಹೇಳಿದರೇನೆ ಹಿಂದೂ ಧರ್ಮಗಳ್ಯಾವುವೋ ತಿಳಿಯುವುದು. ಅಂತಹ ಹಿಂದೂಧರ್ಮಗಳಿರುವ ಗ್ರಂಥಗಳನ್ನು ಸುಡುವವರು ಹಿಂದೂಗಳಾ? ಇವರಿಗೆ ದೊಡ್ಡ ಪಾಪವೇ ಸೇರಿದೆ. ಅದು ಒಂದು ಜನ್ಮಕ್ಕೆ ಮುಗಿಯುವುದಿಲ್ಲ" ಎಂದಿದ್ದಾನೆ. ಪ್ರಪಂಚದಲ್ಲಿನ ಮನುಷ್ಯರು ಕೆಲವರು ಮಾತ್ರವೆ ಆತನ ಜ್ಞಾನವನ್ನು ನೋಡಿ ಪ್ರಶಂಸಿಸಿ ಅನುಸರಿಸುತ್ತಿರುವಾಗ, ಕೆಲವರು ಮಾತ್ರ ಮತಗಳನ್ನು ಅಡ್ಡ ಇಟ್ಟುಕೊಂಡು ಮಾತನಾಡುವುದು ಆತನಿಗೆ ಸ್ವಲ್ಪ ತೊಂದರೆಯಾಗಿ ತೋಚಿದೆ.

ಒಬ್ಬ ಮನುಷ್ಯನಾಗಿ ಆತನನ್ನು ಆಲೋಚಿಸುವಂತೆ ಮಾಡಿದೆ. ಇಷ್ಟು ಮೂರ್ಖರಿಗೆ ನಾನು ಏಕೆ ಜ್ಞಾನ ಹೇಳಬೇಕು? ನಾನೂ ಸಹ ಎಲ್ಲರಂತೆ ಬದುಕಬಹುದು ತಾನೆ! ನಾನು ಹೊರಗೆ ವ್ಯಾಪಾರಗಳಲ್ಲಿ ಸಂಪಾದಿಸಿರುವುದನ್ನೆಲ್ಲಾ ಖರ್ಚುಮಾಡಿ ಯಾರ ಕೈಯಿಂದ ಹಣವನ್ನು ಆಶಿಸದೆ ಕೃಷ್ಣಮಂದಿರವನ್ನು ಕಟ್ಟಿಸಿದರೂ, ಎಷ್ಟೋ ಗ್ರಂಥಗಳು ಬರೆದು ಜ್ಞಾನವನ್ನು ತಿಳಿಸಿದರೂ, ಎಲ್ಲಾರ ಸ್ವಾಮಿಗಳಂತೆ ಹಣಕ್ಕಾಗಿಯೇ ಇದೆಲ್ಲವೂ ಮಾಡುತ್ತಿದ್ದಾನೆನ್ನುವ ಮನುಷ್ಯ ರಿಗೋಸ್ಕರ ಏಕೆ ಮಾಡಬೇಕು? ನನ್ನ ಒಳ್ಳೆಯತನವನ್ನು ಇತ್ತ ಸಂಬಂಧಿಕರಾಗಲಿ, ಕುಲಸ್ಥರಾಗಲಿ, ಹೊರಗಿನವರಾಗಲಿ ಸ್ವಲ್ಪವೂ ಸಹ ಗ್ರಹಿಸದೆ ನೀಚವಾಗಿ, ಹೇಳನವಾಗಿ ಮಾತನಾಡುವಾಗ ಎಲ್ಲರಿಗೂ ಅಗತ್ಯವಾಗಿರುವುದನ್ನು ನಾನು ಏಕೆ ಮಾಡಬೇಕು? ಅಂದುಕೊಳ್ಳುವುದು ನಡೆದಿದೆ. ಒಬ್ಬ ಸಾಧಾರಣ ಮನುಷ್ಯನಿಗೆ ಬರುವ ಆಲೋಚನೆಯೇ ಆತನಲ್ಲಿ ಬಂದರೂ ಕೆಲವು ಸಂದರ್ಭ ಗಳಲ್ಲಿ ಎಲ್ಲವನ್ನೂ ಮರೆತುಹೋಗಿ ಜ್ಞಾನವನ್ನು ಹೇಳುತ್ತಿದ್ದನು. ಅಂದಿನಿಂದ ಹಿಂದುಗಳಿಗೇ ಅಲ್ಲದೆ, ಇತ್ತ ಕ್ರೈಸ್ತರಿಗೂ ಅತ್ತ ಮುಸ್ಲಿಮರಿಗೂ ಸಹ ಜ್ಞಾನವನ್ನು ಹೇಳುತ್ತಿದ್ದನು. ಹೀಗೆ ಪ್ರಬೋಧಾನಂದ ಹೇಳುವ ಜ್ಞಾನ ಕ್ರೈಸ್ತರಿಗೂ, ಮುಸ್ಲಿಮರಿಗೂ ಬಹಳ ಇಷ್ಟವಾಗುತ್ತಿತ್ತು. ಮುಸ್ಲಿಮರು ಬಂದಾಗ ಖುರಾನ್ ಗ್ರಂಥದೊಳಗಿನ ವಾಕ್ಯಗಳಿಗೆ ಸರಿಹೋಗುವ ಜ್ಞಾನವನ್ನೂ, ಕ್ರೈಸ್ತರು ಬಂದಾಗ

ಬೈಬಲ್‌ನಲ್ಲಿನ ವಾಕ್ಯಗಳಿಗೆ ಸರಿಹೋಗುವ ಜ್ಞಾನವನ್ನು ಹೇಳುತ್ತಿದ್ದನು. ಒಂದುಕಡೆ ಹಾಗೆ ನಡೆಯುತ್ತಿದ್ದರೂ ಒಂದುಕಡೆ ನಾನು ಏಕೆ ಇತರ ಮತದವರಿಗೆ ಜ್ಞಾನವನ್ನು ಹೇಳಬೇಕು? ಎನ್ನುವ ಪ್ರಶ್ನೆ ಬರುತ್ತಿತ್ತು. ಆತನ ಗ್ರಂಥಗಳು ಓದಿದ ಹಿಂದೂಗಳು ಕೆಲವರು ಈತನು ನಿಜವಾಗಲೂ ದೇವರೇ ಎಂದಾಗ, ಆತನ ಬೋಧನೆಗಳನ್ನು ಕೇಳಿದ ಕ್ರೈಸ್ತರು, ಮುಸ್ಲಿಮರು ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದರು. ಆದರೆ ಪ್ರಬೋಧಾನಂದ ಆಗಾಗ ಹೀಗೆ ಆಲೋಚಿಸುತ್ತಿದ್ದನು. "ಸಂಸ್ಕೃತ ಸ್ವಲ್ಪವೂ ಬಾರದ ನಾನು ಶಂಕರಾಚಾರ್ಯರಂತೆ ಸಿದ್ಧಾಂತಕರ್ತನಾ? ಎಂದು ಅಂದುಕೊಳ್ಳುವವನು ಒಬ್ಬ ಸಾಧಾರಣ ಮನುಷ್ಯ ಯೋಚಿಸುವಂತೆ ಅಜ್ಞಾನ ಪೊರೆಗಳು ಮುಚ್ಚಿಕೊಂಡು "ಯಾವ ಜ್ಞಾನವೂ ತಿಳಿಯದ ನಾನು ಜ್ಞಾನ ಹೇಳುವುದೇನು? ಏನು ತಿಳಿಯದವರು ನನ್ನನ್ನು ಮೆಚ್ಚುಕೊಳ್ಳುವುದೇನು? ಇದೆಲ್ಲಾ ತಿಳುವಳಿಕೆ ಇಲ್ಲದ ಕೆಲಸ" ಎಂದುಕೊಳ್ಳುತ್ತಿದ್ದನು. ಅಷ್ಟರಲ್ಲಿಯೇ ಜ್ಞಾನವು ತನಗೆ ಜ್ಞಾಪಕ ಬಂದು "ಹೇಳುವವನು ನಾನಲ್ಲ" ಎಂದು ತಿಳಿಯುತ್ತಿದ್ದನು. ಇಂತಹ ಘರ್ಷಣೆ ಆಗಾಗ ನಡೆಯುತ್ತಿತ್ತು.

ಇಂತಹ ಸಂದರ್ಭದಲ್ಲಿ ಹಿಂದೂಗಳೆಂದು, ಹಿಂದೂ ಧರ್ಮ ರಕ್ಷಕರೆಂದು ಹೆಸರು ಇಟ್ಟುಕೊಂಡವರು ತ್ರೈತಸಿದ್ಧಾಂತವನ್ನು ಕ್ರೈಸ್ತವದೊಳಗಿನ ತ್ರಿತ್ವವಾಗಿ ಭಾವಿಸಿ ಪ್ರಬೋಧಾನಂದ ಯೋಗೀಶ್ವರರನ್ನು ಹಿಂದೂ ಮುಸುಗಿ ನಲ್ಲಿರುವ ಕ್ರೈಸ್ತನೆಂದು, ಕ್ರೈಸ್ತಮತವನ್ನು ಪ್ರಚಾರ ಮಾಡುತ್ತಿದ್ದಾನೆಂದು ನಿಂದಿಸುವುದು ನಡೆದಿದೆ. ಅದಕ್ಕೆ ಸ್ಪಂದಿಸಿದ ಪ್ರಬೋಧಾನಂದ ಇನ್ನು ಮೇಲೆ ಯಾರಿಗೂ ಜ್ಞಾನವನ್ನು ಹೇಳಬಾರದು ಎಂದುಕೊಂಡಿದ್ದಾನೆ. ನಾನು ಮನುಷ್ಯರ ಒಳ್ಳೆಯದನ್ನು ಕೋರಿ ಎಷ್ಟೋ ವಿವರವಾಗಿ ಇಂದುತ್ವ (ಹಿಂದುತ್ವ)ದಲ್ಲಿನ ಆತ್ಮಜ್ಞಾನವನ್ನು ಬೋಧಿಸಿದರೆ, ಬೇರೆ ಮತವೆಂದು ಕೆಲವರಂದುಕೊಳ್ಳುವುದರಿಂದ ತಾನು ಜ್ಞಾನವೇ ಹೇಳದಂತೆ ಎಲ್ಲರಂತೆ ಸಾಧಾರಣವಾಗಿ ಇರಬೇಕೆಂದು ಕೊಂಡಿದ್ದಾನೆ. ಒಂದುಕಡೆ ಯಾರೋ ಅಜ್ಞಾನಿಗಳು ಅಂದುಕೊಳ್ಳುವ ಮಾತುಗಳಿಗೆ ಏಕೆ ತಲೆಕೆಡಿಸಿಕೊಳ್ಳಬೇಕು, ನಾನು ಮತವೆಂಬ ಹೆಸರಿನಿಂದ ಯಾವ

ಬೋಧನೆಗಳು ಹೇಳಲಿಲ್ಲ ಅಲ್ಲವೇ! ನಾನು ಹೇಳುವುದು ಸ್ವಚ್ಛವಾದ ದೈವಜ್ಞಾನ ಅಲ್ಲವೇ! ಎಂದುಕೊಳ್ಳುತ್ತಿದ್ದನು. ಈ ವಿಧವಾದ ಆಲೋಚನೆಗಳಲ್ಲಿ ಆತನಲ್ಲಿ ಸ್ವಲ್ಪ ಸ್ತಬ್ಧತೆ ಏರ್ಪಟ್ಟಿದೆ. ಆತನು ಮೊದಲು ಪ್ರಬೋಧ ಗ್ರಂಥವನ್ನು ಬರೆದ ನಂತರ, ಒಬ್ಬ ಸ್ವಾಮೀಜಿ ಹತ್ತಿರ ಮಂತ್ರೋಪದೇಶ ಪಡೆದು ಪ್ರಬೋಧಾನಂದ ಎನ್ನುವ ಹೆಸರನ್ನು ಪಡೆದ ನಂತರ, 1980ನೇ ವರ್ಷದಲ್ಲಿ ಪ್ರಬೋಧಾಶ್ರಮವನ್ನು ಸ್ಥಾಪಿಸಿದನು. ಹಿಂದೂಪರಿಷತ್‌ನಲ್ಲಿನ ಅಜ್ಞಾನಿಗಳು ಕೆಲವರು ಆರೋಪಣೆಗಳು ಮಾಡುವುದರಿಂದ ಪ್ರಬೋಧಾಶ್ರಮ ಎಂಬ ಹೆಸರನ್ನು ತೆಗೆದುಹಾಕ ಬೇಕೆಂದುಕೊಂಡನು. ಆ ಸಮಯದಲ್ಲಿ ಶ್ರೀ ಪೋತುಲೂರಿ ವೀರಬ್ರಹ್ಮರವರು ಬರೆದ ಕಾಲಜ್ಞಾನದಲ್ಲಿ "ಪ್ರಬೋಧಾಶ್ರಮವು ಉನ್ನತ ಜ್ಞಾನ ಹೊಂದಿರುವುದು" ಎಂಬ ವಾಕ್ಯವಿರುವಂತೆ ವೀರನಾರಾಯಣರೆಡ್ಡಿ ಎಂಬ ವ್ಯಕ್ತಿ ಮೂಲಕ ತಿಳಿದಿದೆ. ಆಗ ಅಷ್ಟುದೊಡ್ಡ ಯೋಗೀಶ್ವರರಾದ ವೀರಬ್ರಹ್ಮಯ್ಯನವರೆ, ಆತನು ಬರೆದ ಕಾಲಜ್ಞಾನದಲ್ಲಿ ಪ್ರಬೋಧಾಶ್ರಮವನ್ನು ಕುರಿತು ಅಷ್ಟುದೊಡ್ಡದಾಗಿ ಮುನ್ನೂರು ವರ್ಷಗಳ ಕೆಳಗೆಯೇ ಬರೆದಿದ್ದರೆ ಸ್ವಲ್ಪವೂ ಸಹ ಹಿಂದೂತ್ವದ ಜ್ಞಾನ ತಿಳಿಯದವರು ನಾವು ಹಿಂದೂಗಳೆಂದು ಹೆಸರು ಇಟ್ಟುಕೊಂಡು ಅಜ್ಞಾನವಾಗಿ ಮಾತನಾಡಿದರೆ ಅವರ ಮಾತುಗಳನ್ನು ಏಕೆ ಲೆಕ್ಕಿಸಬೇಕೆಂದು ಕೊಂಡಿದ್ದಾನೆ. ನಂತರ ಪ್ರಬೋಧಾನಂದ ಯೋಗೀಶ್ವರರೆ ಸ್ವತಃವಾಗಿ ಬ್ರಹ್ಮರವರು ಬರೆದ ಏಷ್ಯ ಕಾಲಜ್ಞಾನವೆಂಬ ಗ್ರಂಥವನ್ನು ನೋಡುವುದು ನಡೆದಿದೆ. ಅದರಲ್ಲಿ ಪ್ರಬೋಧಾನಂದ ಯೋಗೀಶ್ವರರು ನಂಬಲಾಗದ ನಿಜವೊಂದು ಕಾಣಿಸಿದೆ. ಅದು ಏನೆಂದರೆ! **ಪ್ರಬೋಧಾಶ್ರಮಾಧಿಪತಿ ಶಯನಾಧಿಪತಿ ಗುಣಗಳು ಹೊಂದಿದ್ದಾನೆಂದು, ಶಯನಾಧಿಪತಿಯೆ ಆನಂದ ಗುರುವೆಂದು, ಆನಂದಗುರುವೇ ನಿನಗೂ ನನಗೂ ಗುರುವೆಂದು** ಬರೆಯಲಾಗಿದೆ. ಅಷ್ಟೇ ಅಲ್ಲದೆ ಇನ್ನು ಬಹಳ ವಿಷಯಗಳು ಆನಂದಗುರುವು ಎನ್ನುವ ಹೆಸರಿನಿಂದ ಬರೆಯಲಾಗಿದೆ. ಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಹೇಳಿದ ಗುರುವು ತಾನೇ ಎಂದು ಪ್ರಬೋಧಾನಂದರವರಿಗೆ ಅರ್ಥವಾಗಿಹೋಗಿದೆ.

ಶ್ರೀ ಪೋತುಲೂರಿ ವೀರಬ್ರಹ್ಮಯ್ಯನವರು ಹೇಳಿದ ವಿಷಯಗಳೆಲ್ಲವೂ ತನ್ನ ಕುರಿತಾಗಿಯೇನಾ ಎಂದು ಒಂದುಕಡೆ ಯೋಚನೆಬಂದರೆ, ತನ್ನನ್ನು ಕುರಿತಾಗಿಯೇ ಎಂದು ಮತ್ತೊಂದು ಕಡೆ ಯೋಚನೆ ಬರುತ್ತಿತ್ತು. ಆ ಸಮಯಕ್ಕಾಗಲೇ ಪ್ರಬೋಧಾನಂದ ಯೋಗೀಶ್ವರರ ಹತ್ತಿರ ದೇವತೆಗಳು ಸಹಿತವು ಮಾತು ಕೇಳಿ ಹೋಗುವುದು, ಆತನ ಬಾಯಿಮಾತಿನಿಂದ ಕೆಲವು ಭಯಂಕರವಾದ ರೋಗಗಳು, ಕ್ಯಾನ್ಸರ್, ಏಡ್ಸ್‌ನಂತಹ ರೋಗಗಳು ವಾಸಿಯಾಗುವುದು ನಡೆಯುವುದರಿಂದ ಕೆಲವರ ದೃಷ್ಟಿಯಲ್ಲಿ ಆತನು ಸ್ವಲ್ಪ ಹೆಸರುವಾಸಿಯಾಗುತ್ತಾ ಬಂದನು. ಆತನು ಮಾತ್ರ ತನಗೆ ಯಾವ ಗುರುತಿಲ್ಲದೆ ಸಾಧಾರಣವಾಗಿ ಇರಬೇಕೆಂದುಕೊಳ್ಳುತ್ತಿದ್ದನು. ಆತನಿಗೆ ಸಾಟಿಯಿಲ್ಲದ ಸಾಧಾರಣ ಮನುಷ್ಯರು ಆತನನ್ನು ಕುರಿತು ಅಸೂಯೆಯಿಂದ ದೂಷಣೆಮಾಡಿ ಮಾತನಾಡಿದರೂ, ಆ ಸಮಯದಲ್ಲಿ ಅಲ್ಲಿ ಯಾರಾದರೂ ದೇವತೆಗಳು ಇದ್ದಿದ್ದರೆ ಅವರ ಮಾತುಗಳನ್ನು ಕೇಳಿ ಆತನನ್ನು ದೂಷಿಸಿದಕ್ಕೆ ಆ ದೇವತೆಗಳು ಮನುಷ್ಯರ ಮೇಲೆ ಕೋಪಿಸಿ ಕೊಂಡು ಅವರನ್ನು ಹಿಂಸಿಸಿದ ಘಟನೆಗಳು ಕೆಲವು ಇರುವಾಗ, ನೇರವಾಗಿ, ದೇವತೆಗಳು ಅವರನ್ನು ಸಾಯಿಸಿದ ಘಟನೆಗಳು ಸಹ ಕೆಲವು ಇವೆ. ಇಂತಹ ವಿಷಯಗಳನ್ನು ತಿಳಿದ ಯೋಗೀಶ್ವರರು ತಾನು ವೀರಬ್ರಹ್ಮಯ್ಯನವರು ಹೇಳಿದ ವ್ಯಕ್ತಿಯೇ ಎಂದು ಅಂದುಕೊಳ್ಳುತ್ತಿದ್ದನು. ಅಷ್ಟರಲ್ಲಿಯೇ ಮತ್ತೊಂದು ವಿಧವಾದ ಯೋಚನೆಯಿಂದ ಅಂತಹ ದೊಡ್ಡ ವ್ಯಕ್ತಿಯಾದರೆ ಹೀಗೆ ಯಾಕಿರುತ್ತೇನೆ. ನನಗಿಂತ ಅಜ್ಞಾನಿಗಳೇ ಎಲ್ಲಾ ವಿಧಗಳಲ್ಲಿ ಯೋಗ್ಯತೆಯಾಗಿ, ಧನಿಕರಾಗಿ, ಹೆಸರುವಾಸಿಯಾಗಿ ಪ್ರಖ್ಯಾತಿಗಳು ಹೊಂದಿದವರಾಗಿದ್ದಾರೆ ಅಲ್ಲವೆ! ಅಂತಹವರ ಮುಂದೆ ನಾನು ಎಷ್ಟು? ನನಗೆ ಕೆಲವು ವರ್ಷಗಳಿಂದ ಶುಗರ್ ರೋಗವಿದೆ. ಔಷಧಿಗಳು ಎಷ್ಟು ಬಳಸಿದರೂ ಕಡಿಮೆಯಾಗದಂತೆ ಯಾವಾಗಲೂ 300 ಇಲ್ಲವೆ 350 ಪಾಯಿಂಟ್ಸ್‌ಗಿಂತ ಹೆಚ್ಚಾಗಿ ಇರುತ್ತದೆ. ಅಷ್ಟೇ ಅಲ್ಲದೆ ಎಲ್ಲರಿಗಿರುವಂತೆ ನನಗೂ ಕೆಲವು ಸಮಸ್ಯೆಗಳು ಇವೆ. ಎಲ್ಲರಂತೆ ಸರ್ವಸಾಧಾರಣ ವಾಗಿರುವ ನನಗೆ ವೀರಬ್ರಹ್ಮಯ್ಯನವರು ಹೇಳಿದ ಮಾತಿಗೆ ಹೋಲಿಕೆಗಳು ಇಲ್ಲ. ಆದ್ದರಿಂದ ವೀರಬ್ರಹ್ಮಯ್ಯನವರು ಹೇಳಿದ ವ್ಯಕ್ತಿ ಮತ್ತೊಬ್ಬರಿರಬಹುದು.

ನಾನು ಮಾತ್ರ ಅಲ್ಲವೆಂದು ಅಂದುಕೊಳ್ಳುತ್ತಿದ್ದನು. ಆತನು ಹೇಳಿದ ಜ್ಞಾನ ಆತನಿಗೆ ಜ್ಞಾಪಕ ಬಂದಾಗ ನಾನು ಒಬ್ಬ ಜೀವಾತ್ಮ ಮಾತ್ರವೇ, ಎಲ್ಲದಕ್ಕೂ ಕಾರಣ ಆತ್ಮ ಎಂದು ಅಂದುಕೊಳ್ಳುತ್ತಿದ್ದನು.

ಆ ಸಮಯಕ್ಕೆ ಪ್ರಬೋಧಾನಂದ ಯೋಗೀಶ್ವರರು ಮೂವತ್ತಾರು (36) ಗ್ರಂಥಗಳನ್ನು ಬರೆಯುವುದು ನಡೆದಿದೆ. ನಂತರ ಇಸ್ಲಾಂ ಮತ್ತು ಕ್ರೈಸ್ತವ ಗ್ರಂಥಗಳೆಂದು ಹೆಸರುವಾಸಿಯಾದ ಖುರಾನ್, ಬೈಬಲ್ ಗ್ರಂಥಗಳು, ದೈವವಾಕ್ಕು ಗಳಿರುವ ಗ್ರಂಥಗಳೆಂದು ಅವುಗಳಲ್ಲಿನ ಪರಮಾರ್ಥವನ್ನು ಆಯಾ ಮತದವರು ಗ್ರಹಿಸಲಿಲ್ಲವೆಂದು, ಇಲ್ಲಿಯವರೆಗೂ ಅವರಿಗೆ ತಿಳಿದಿರುವುದು ಸರಿಯಾದ ಭಾವನೆ ಅಲ್ಲವೆಂದು, ಅವುಗಳ ವಿವರಗಳನ್ನು ನನ್ನ ಗ್ರಂಥಗಳಾದ **"ಖುರಾನ್‌ನಲ್ಲಿ ಪವಿತ್ರ ವಾಕ್ಯಗಳು"** ಮತ್ತು **"ಬೈಬಲ್‌ನಲ್ಲಿನ ಪವಿತ್ರ ವಾಕ್ಯಗಳು"** ಎನ್ನುವವುಗಳಲ್ಲಿ ಹೇಳಲಾಗುತ್ತದೆಂದು ಆತನು ಹೇಳುವುದು ಆತನಿಗೇ ಆಶ್ಚರ್ಯವಾಗಿದೆ. ಆಯಾ ಮತಗಳಲ್ಲಿ ಎಷ್ಟೋಜನ ಮತಪಂಡಿತರು, ಅವರವರ ಜ್ಞಾನದಲ್ಲಿ ನಿಪುಣರಿರುವಾಗ, ಅವರನ್ನು ಅತಿಕ್ರಮಿಸಿ ಅವರಿಗೆ ದೇವರ ವಾಕ್ಯಗಳ ಪರಮಾರ್ಥವು ತಿಳಿದಿಲ್ಲವೆಂದು, ನಾನು ಹೊರತು ಯಾರೂ ಹೇಳುವುದಿಲ್ಲವೆಂದು ಪ್ರಕಟಿಸುವುದು ಆತನಿಗೆ ವಿಚಿತ್ರವಾಗಿ ತೋಚುವುದಲ್ಲದೆ ಇದು ಹೇಗೆ ಸಾಧ್ಯ ಎನಿಸಿದೆ. ಎಂತಹ ಪರಿಚಯವಿಲ್ಲದ ಇತರ ಮತ ಗ್ರಂಥಗಳ ವಿವರವು ಹೇಳುತ್ತೇನೆಂದು ಅಂದುಕೊಳ್ಳುವುದು ತನ್ನಲ್ಲಿನ ಗರ್ವ ಹೊರತು ಏನು ಅಲ್ಲವೆಂದು, ಹಾಗೆ ಹೇಳುವುದು ಪೂರ್ತಿ ಅಸಾಧ್ಯವೆಂದು, ಮಾಯ (ಸಾತಾನ್ ಅಥವಾ ಸೈತಾನ್, (ಇಬ್ಲಿಸ್)ಎನ್ನುವುದು ಹಾಗೆ ಅನಿಸುತ್ತಿದೆಂದು ಆತನು ಅಂದುಕೊಳ್ಳುವುದು ನಡೆದಿದೆ. ಯಾರಾದರು ತನ್ನ ಮಾತುಗಳನ್ನು ಕೇಳಿದರೆ ನಗುತ್ತಾರೆಂದುಕೊಂಡನು. ಒಂದುಕಡೆ ಪ್ರಪಂಚದಲ್ಲಿ ಎಲ್ಲಿಯೂ ಇಲ್ಲದ ಆತ್ಮಜ್ಞಾನವನ್ನು ಶಾಸ್ತ್ರಬದ್ಧವಾಗಿ ಹೇಳುತ್ತಿದ್ದರೂ ತನ್ನ ಸಿದ್ಧಾಂತದ ಪ್ರಕಾರ ಎಲ್ಲಾ ಆತ್ಮ ಮಾಡುತ್ತಿದೆ ಎಂದು ತನ್ನನ್ನು ತಾನು ಪೂರ್ತಿ ಕಡಿಮೆ ಮಾಡಿಕೊಳ್ಳುತ್ತಿದ್ದರು.

ಆತ್ಮಜ್ಞಾನದ ಪ್ರಕಾರ ಪ್ರಬೋಧಾನಂದ ತಾನು ಏನು ಮಾಡಲಿಲ್ಲವೆಂದು, ತಾನು ಯಾವ ದೊಡ್ಡಸ್ತಿಕೆ ಇಲ್ಲದವನೆಂದು, ತನಲ್ಲಿ ಯಾವ ಪ್ರತ್ಯೇಕತೆ ಇಲ್ಲವೆಂದು ಹೇಳುವುದು ವಾಸ್ತವವೆ, ಆದರೂ ಪ್ರಪಂಚದಲ್ಲಿ ಎಲ್ಲರಿಗೂ ಆ ವಿಷಯವು ತಿಳಿದಿಲ್ಲ ಅಲ್ಲವೆ! ಆದ್ದರಿಂದ ಮೇಲ್ನೋಟಕ್ಕೆ ಕಾಣಿಸುವ ಪ್ರಬೋಧಾನಂದ ಯೋಗೀಶ್ವರರೇ ಎಲ್ಲಾ ಮಾಡುತ್ತಿದ್ದಾನೆಂದುಕೊಳ್ಳುವುದು ನಡೆಯುತ್ತದೆ. ಆತನೇ ಬರೆಯುತ್ತಿದ್ದಾನೆಂದು, ಆತನೇ ಬೋಧಿಸುತ್ತಿದ್ದಾನೆಂದು ಅಂದುಕೊಳ್ಳುವುದರಿಂದ ಜ್ಞಾನ ಅರ್ಥವಾಗದ ಮನುಷ್ಯರು ಎಲ್ಲವುದಕ್ಕೂ ಆತನನ್ನೇ ಜವಾಬ್ದಾರಿ ಯುತನನ್ನಾಗಿ ಮಾಡಿ ತಮಗೆ ವಿರುದ್ಧವಾದ ಜ್ಞಾನವನ್ನು ಹೇಳುತ್ತಿದ್ದಾ ನೆಂದುಕೊಳ್ಳುವುದು ನಡೆಯುತ್ತಿತ್ತು. ಅಧರ್ಮವರರಿಗೆ ಧರ್ಮವರರು ವಿರುದ್ಧವೇ ತಾನೆ! ಶರೀರವೆ ತಾವು, ಎಂದುಕೊಳ್ಳುವ ಮನುಷ್ಯರೆಲ್ಲರೂ ಕಾಣಿಸುವ ಶರೀರದಿಂದಿರುವ ಪ್ರಬೋಧಾನಂದನನ್ನು ತಮ್ಮಂತೆ ಇರುವ ಮನುಷ್ಯನಾಗಿ ಲೆಕ್ಕಿಸಿಕೊಳ್ಳುವುದು ನಡೆದಿದೆ. ಆದರಿಂದ ಮಾಡುವುದು ಆತ್ಮ, ಅಂದುಕೊಳ್ಳುವುದು ನನ್ನನ್ನು ಎನ್ನುವ ತಪನೆ ಪ್ರಬೋಧಾನಂದನಲ್ಲಿ ಇರುತ್ತಿತ್ತು. ಹೀಗೆ ಏಕೆ ನಡೆಯಬೇಕು ಎನ್ನುವ ಪ್ರಶ್ನೆ ಆತನಿಗಿರುತ್ತಿತ್ತು. ಈ ಪ್ರಶ್ನೆ ಆತನದ್ದೇ ಅಲ್ಲ ಪ್ರಜೆಗಳ ಪರವಾಗಿ ಎಲ್ಲಾರದ್ದು ಎಂದುಕೊಳ್ಳೋಣ. ಅದಕ್ಕೆ ಎಲ್ಲರಿಗೂ ಅರ್ಥವಾಗುವಂತೆ ದೇವರೇ ಉತ್ತರ ಹೇಳಬೇಕು. ಈ ಉತ್ತರ ತಪ್ಪದೆ ಪ್ರಬೋಧಾನಂದ ಯೋಗೀಶ್ವರರಿಗೆ ಮತ್ತು ಪ್ರಜೆಗಳಿಗೆ ತಿಳಿಯಬೇಕು. ಆದ್ದರಿಂದ ದೇವರೇ ತನ್ನ ವಿಧಾನವನ್ನು ಅನುಸರಿಸಿ ಪ್ರಬೋಧಾನಂದ ಯೋಗೀಶ್ವರರ ಹೃದಯದಿಂದ ತಿಳಿಸುವುದು ನಡೆದಿದೆ. ಪ್ರಬೋಧಾನಂದ ಹೃದಯದಿಂದ ಏನು ತಿಳಿದು ಬಂದಿದೆಯೋ ಪ್ರಜೆಗಳಿಗೂ ಸಹ ತಿಳಿಯಬೇಕು, ಆದ್ದರಿಂದ ವಿವರವಾಗಿ ತಿಳಿಸುತ್ತೇನೆ ನೋಡಿರಿ. ಈಗ ಕೆಲವರು ಒಂದು ಪ್ರಶ್ನೆ ಕೇಳಬಹುದು. ಅದೇನೆಂದರೆ! ಪ್ರಬೋಧಾನಂದ ಹೃದಯದಲ್ಲಿ ತಿಳಿಸಿರುವುದು ಆತನಿಗೆ ಮಾತ್ರವೆ ತಿಳಿದಿದೆ ತಾನೆ! ಆತನು ತಿಳಿಸಿದರೆ ತಾನೆ ಉಳಿದ ಪ್ರಜೆಗಳಿಗೆ ತಿಳಿಯುವುದು. ಆತನು ಹೇಳದಂತೆ ನೀವು ಹೇಗೆ ಆ ವಿಷಯವನ್ನು ತಿಳಿಸುತ್ತಿದ್ದೀರೆಂದು ಕೇಳಬಹುದು. ಅದಕ್ಕೆ ನನ್ನ ಸಮಾಧಾನವನ್ನು ಕೆಳಗೆ ನೋಡಿರಿ.

ಪ್ರಬೋಧಾನಂದ ಯೋಗೀಶ್ವರರು ಎಂಬ ಹೆಸರಿರುವ ವ್ಯಕ್ತಿಯೊಂದರ ಶರೀರದಲ್ಲಿ ಪ್ರಕೃತಿ (ಸ್ತ್ರೀ) ಸಂಬಂಧವಾದ ಭಾಗಗಳು ಅಲ್ಲದೆ, ಪರಮಾತ್ಮ (ಪುರುಷ) ಸಂಬಂಧವಾದ ಭಾಗಗಳು ಮೂರು ಇವೆ. ಆ ಮೂರರಲ್ಲಿ ಒಂದು ಜೀವಾತ್ಮ, ಎರಡು ಆತ್ಮ, ಮೂರು ಪರಮಾತ್ಮ. ಆ ಶರೀರದಲ್ಲಿ ಜೀವಾತ್ಮವಾಗಿರುವ ಪ್ರಬೋಧಾನಂದ ಎನ್ನುವವನು ನಾನೇ, ಆದ್ದರಿಂದ ಆ ಶರೀರದಲ್ಲಿನ ಪರಮಾತ್ಮ ಆತ್ಮನಿಂದ ಏನು ಹೇಳಿಸಿರುವುದು ಮೊದಲು ನನಗೇ ತಿಳಿದಿದೆ. ಈಗ ನಾನು ಹೇಳಿದರೆ ನಿಮಗೆ ತಿಳಿಯುತ್ತದೆ ಎಂದು ನೀವು ಅಂದುಕೊಳ್ಳಬಹುದು. ವಿವರವಾಗಿ ಹೇಳಬೇಕೆಂದರೆ ಪ್ರಬೋಧಾನಂದ ಯೋಗೀಶ್ವರರಾಗಿ ಹೊರಗೆ ಪ್ರಜೆಗಳಿಗೆ ನಾನು ಲೆಕ್ಕಿಸಲ್ಪಡುತ್ತಿದ್ದರು ನಾನು ಕೇವಲ ಜೀವಾತ್ಮವೇ ಆದರೂ, ಪ್ರಬೋಧಾನಂದ ಯೋಗೀಶ್ವರರಾಗಿ ಇಲ್ಲಿಯವರೆಗೂ ಮಾತನಾಡಿರುವುದು ನಾನೇ ಎಂದುಕೊಂಡರೂ ಈಗಿನಿಂದ ಮಾತನಾಡುವುದು ಪರಮಾತ್ಮ ಅಂಶದಿಂದ ಕೂಡಿಕೊಂಡ ಇಲ್ಲವೇ ಪರಮಾತ್ಮ ಆಜ್ಞೆಯಿಂದ ಕೂಡಿಕೊಂಡ ಆತ್ಮವೆಂದು ತಿಳಿಯಬೇಕು.

ಪ್ರಬೋಧಾನಂದ ಯೋಗೀಶ್ವರರು ಹುಟ್ಟಿದ ವರ್ಷದ ಹೆಸರು ವಿಕೃತಿ ನಾಮಸಂವತ್ಸರ. ಪ್ರಕೃತಿಗೂ ವಿಕೃತಿಗೂ ವಿಭಿನ್ನವಾದುದು. ಒಂದು ಲೆಕ್ಕದ ಪ್ರಕಾರ ಹೇಳಿದರೆ ಪ್ರಕೃತಿ ಎಂದರೆ ಮಾಯೆ, ವಿಕೃತಿ ಎಂದರೆ ಮಾಯೆಗಿಂತ ವಿಭಿನ್ನವಾದ ದೇವರು ಎಂದು ಅರ್ಥ. ದೈವಕ್ಕೆ ಗುರುತಾಗಿ ಕರೆಯುವ ವಿಕೃತಿ ನಾಮ ಸಂವತ್ಸರದಲ್ಲಿ ಹುಟ್ಟುವುದೆ ಪ್ರಬೋಧಾನಂದ ಯೋಗೀಶ್ವರರಿಗೆ ಒಂದು ಪ್ರತ್ಯೇಕತೆ ಎಂದು ತಿಳಿಯಬೇಕು. ಇಲ್ಲಿಗೆ ವಿಕೃತಿ ನಾಮಸಂವತ್ಸರ ಎರಡನೆಬಾರಿ ಬಂದು ಅದರ ನಂತರ ಖರ ನಾಮ ಸಂವತ್ಸರವೂ, ಅದರ ನಂತರ ನಂದನ ನಾಮಸಂವತ್ಸರವು ಬಂದಿದೆ. ಎರಡನೆಬಾರಿ ಬಂದಿರುವ ವಿಕೃತಿ 61ನೇ ಸಂವತ್ಸರವಾಗಿದ್ದು, ಖರ 62ನೇ, ಸಂವತ್ಸರವಾಗಿದೆ. ಈಗ ಪ್ರಸ್ತುತ ನಡೆಯುತ್ತಿರುವ ನಂದನ ಸಂವತ್ಸರ 63ನೇ ವರ್ಷ. ಆದ್ದರಿಂದ ಈಗ ಪ್ರಬೋಧಾನಂದ ಯೋಗೀಶ್ವರರ ವಯಸ್ಸು 62 ಮುಗಿದುಹೋಗಿ 63ನೇ ವರ್ಷ ನಡೆಯುತ್ತಿದೆ. ಪ್ರಬೋಧಾನಂದ ಯೋಗೀಶ್ವರರು ಜ್ಞಾನ ಎಂಬ ಅರ್ಥಕೊಡುವ ಇಂದೂ

ಮತದಲ್ಲಿ (ಹಿಂದೂಮತದಲ್ಲಿ) ಹುಟ್ಟುವುದು ನಡೆದಿದೆ. ಪ್ರತ್ಯೇಕವಾದ ಪೂರ್ವ ಚರಿತ್ರೆ ಇರುವ ಕಮ್ಮ (ಚೌದರಿ) ಕುಲದಲ್ಲಿ ಹುಟ್ಟುವುದಾಗಿದೆ. ಕಮ್ಮ ಕುಲದಲ್ಲಿ ಎಷ್ಟೋ ಮನೆ ಹೆಸರುಗಳು (ವಂಶದ ಹೆಸರುಗಳು) ಇದ್ದರೂ ಪ್ರತ್ಯೇಕಿಸಿ ಗುತ್ತಾ ವಂಶದಲ್ಲಿಯೇ ಹುಟ್ಟುವುದು ನಡೆದಿದೆ. ಪ್ರಬೋಧಾನಂದ ಹುಟ್ಟಿದ ವರ್ಷ, ಹುಟ್ಟಿದ ಮತವೂ, ಹುಟ್ಟಿದ ವಂಶವೂ, ಹುಟ್ಟಿದ ಕುಲವೂ ಎಲ್ಲಾ ಒಂದು ವಿಧವಾಗಿ ಪ್ರತ್ಯೇಕತೆ ಹೊಂದಿರುವವೆ ಎಂದು ಹೇಳಬಹುದು. ಆತನು ಹುಟ್ಟಿದಾಗಲೇ ವರ್ಷದ ಹೆಸರು, ವಂಶದ ಹೆಸರು ಎರಡೂ ಬದಲಾಗದೆ ಇರುವಾಗ, ಮತ, ಕುಲದ ಹೆಸರುಗಳಲ್ಲಿ ಸ್ವಲ್ಪ ಬದಲಾವಣೆ ನಡೆದಿದೆ. ಜ್ಞಾನಿಗಳ ಮತವೆಂಬ ಹೆಸರಿರುವುದು, ಶಿವನು ಧರಿಸಿದ ಅರ್ಧಚಂದ್ರಾಕಾರ ಹೆಸರಿರುವುದಾದ ಇಂದೂಮತವು ಯಾವ ಅರ್ಥವೂ ಇಲ್ಲದ ಹಿಂದೂ ಮತವಾಗಿ ಬದಲಾಗಿಹೋಗಿದೆ. ಹಾಗೆಯೇ ಎಷ್ಟೋ ಪ್ರೀತಿಯಿಂದ ಆದರಿಸಿ ಅನ್ನ ಇಡುವ ಅಮ್ಮಕುಲವಾಗಿ ಹೆಸರುವಾಸಿಯಾದ ಕುಲ ಕಮ್ಮಕುಲವಾಗಿ ಬದಲಾಗಿಹೋಗಿದೆ. ಕುಲ, ಮತಗಳು ಮಧ್ಯದಲ್ಲಿ ಹುಟ್ಟಿಬಂದಿರುವವಾದರು, ವಂಶ ಎನ್ನುವುದು ಆದಿಯಲ್ಲಿಯೇ ಏರ್ಪಡಿಸಲಾಗಿದೆ. ಪ್ರಬೋಧಾನಂದ ಜೀವನವು ದೈವಾಂಶವಿರುವ ಆತ್ಮದಿಂದ ಕೂಡಿಕೊಂಡಿದೆ, ಆದ್ದರಿಂದ ಆತನು ಪ್ರತ್ಯೇಕಿಸಿ ಗುತ್ತಾವಂಶದಲ್ಲಿ ಹುಟ್ಟುವುದು ನಡೆದಿದೆ. ಈಗ ಗುತ್ತಾ ಎಂಬ ಹೆಸರಿನಲ್ಲಿರುವ ವಿಶಿಷ್ಟತೆಯನ್ನು ಕುರಿತು ತಿಳಿದುಕೊಳ್ಳೋಣ.

ಈ ಪುಸ್ತಕದ ಮೊದಲಿನಲ್ಲಿಯೇ "ಗು" ಎಂಬ ಅಕ್ಷರವನ್ನು ಕುರಿತು ಹೇಳುಲಾಗಿದೆ. "ಗು" ಎಂದರೆ ರಹಸ್ಯವೆಂದು, ರಹಸ್ಯವಾದದ್ದು ದೈವವೆಂದು, ಪರಮಾತ್ಮನನ್ನು (ದೈವವನ್ನು) ತಿಳಿಸುವ ಗುರುತಾಗಿ "ಗು"ಅನ್ನು ಬಳಸುತ್ತಿದ್ದೇವೆಂದು ಹೇಳಿಕೊಂಡಿದ್ದೇವೆ. ದೇವರು ಮೂರು ಆತ್ಮಗಳಾಗಿ ವಿಭಜಿಸಲ್ಪಟ್ಟಿದ್ದಾನೆಂದು ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ 16, 17 ಶ್ಲೋಕಗಳಲ್ಲಿ ಹೇಳಲಾಗಿದೆ. ದೇವರಾದ ಪುರುಷನು ಆಧ್ಯಾತ್ಮಿಕ ಜ್ಞಾನದಲ್ಲಿ ಮೂವರು ಪುರುಷರಾಗಿ ಹೇಳಲ್ಪಡುತ್ತಿದ್ದಾನೆ. ಆದಿಯಲ್ಲಿ ಮೊದಲು ಪರಮಾತ್ಮನಿಂದ ಆತ್ಮ ಉದ್ಭವಿಸಿದಾಗ, ನಂತರ ಜೀವಾತ್ಮ ಉದ್ಭವಿಸಿದೆ.

ಪ್ರಪಂಚದಲ್ಲಿ ಜೀವಾತ್ಮ, ಆತ್ಮಗಳು ಜೋಡಿ ಆತ್ಮಗಳಾಗಿ ಶರೀರದಲ್ಲಿರುವಾಗ, ಪರಮಾತ್ಮ ಪ್ರತ್ಯೇಕವಾಗಿದ್ದಾನೆ. ಸಾಧಾರಣ ಮನುಷ್ಯನಲ್ಲಿ ಜೀವಾತ್ಮ, ಆತ್ಮಗಳು ಎರಡೂ ಹುಟ್ಟುವುದು ಸಾಯುವುದು ನಡೆಯುತ್ತಿದೆ. ಪರಮಾತ್ಮ ಮಾತ್ರ ಹುಟ್ಟುವವನಲ್ಲ, ಗಿಟ್ಟುವವನಲ್ಲ. ಜೀವರಾಶಿಗಳ ಶರೀರದಲ್ಲಿ ಇಲ್ಲವೆ ಮನುಷ್ಯರ ಶರೀರದಲ್ಲಿ ಪರಮಾತ್ಮ, ಆತ್ಮ ಜೀವಾತ್ಮಗಳೊಂದಿಗೆ ಎಂತಹ ಸಂಬಂಧವಿಲ್ಲದಂತೆ ಇದ್ದಾನೆ. ಜೀವಿಯ ಕರ್ಮಾನುಸಾರ ಆತ್ಮ ಶರೀರವನ್ನು ಆಡಿಸುತ್ತಿರುವಾಗ, ಶರೀರದಲ್ಲಿ ಸಂಭವಿಸುವ ಕಷ್ಟಸುಖಗಳನ್ನು ಜೀವಿ (ಜೀವಾತ್ಮ) ಅನುಭವಿ ಸುತ್ತಿದ್ದಾನೆ. ಪ್ರತಿ ಮನುಷ್ಯನಲ್ಲಿಯೂ ಹಾಗೆಯೇ ಪ್ರತಿ ಪ್ರಾಣಿಯಲ್ಲಿರುವ ಜೀವಾತ್ಮಕ್ಕೆ ಆತ್ಮಜೊತೆಯಾಗಿದ್ದು, ಜೀವಾತ್ಮ ಆತ್ಮ ಒಂದಕ್ಕೊಂದು ಸಂಬಂಧಹೊಂದಿವೆ. ಮೂರನೆಯದಾದ ಪರಮಾತ್ಮ ಶರೀರದಲ್ಲಿ ಇದ್ದರೂ ಜೀವಾತ್ಮ ಆತ್ಮದೊಂದಿಗೆ ಎಂತಹ ಸಂಬಂಧವಿಲ್ಲದೆ ಇರುವುದಲ್ಲದೆ ಶರೀರದಿಂದ ಆತ್ಮ ಜೀವಾತ್ಮಗಳು ಹೋಗಿ ಮರಣವನ್ನು ಹೊಂದಿದರೂ, ಮೃತದೇಹದಲ್ಲಿಯೂ ಸಹ ಪರಮಾತ್ಮ ವ್ಯಾಪಿಸಿದೆ. ಇನ್ನೂ ಪರಮಾತ್ಮ ಅಂಶದಿಂದ ಕೂಡಿಕೊಂಡ ಶರೀರದಲ್ಲಿ ಆತ್ಮ ಪರಮಾತ್ಮದೊಂದಿಗೆ ಸಂಬಂಧಪಟ್ಟಿರುತ್ತದೆ. ಆತ್ಮ ಒಂದುಕಡೆ ಶರೀರದಲ್ಲಿನ ಪರಮಾತ್ಮದೊಂದಿಗೆ ಸಂಬಂಧ ಇಟ್ಟುಕೊಂಡು, ಇನ್ನೊಂದು ಕಡೆ ಜೀವಿ ಯೊಂದಿಗೆ ಸಹ ಸಂಬಂಧವಿಟ್ಟುಕೊಂಡು ಶರೀರವನ್ನು ನಡೆಸುತ್ತಿದೆ. ಅಂತಹ ಶರೀರವಿರುವ ವ್ಯಕ್ತಿಯದ್ದು ಪ್ರತ್ಯೇಕವಾದ ಜನ್ಮವೆಂದು ಅನ್ನಬಹುದು. ಆ ಶರೀರದಲ್ಲಿರುವ ಆತ್ಮ ಸರ್ವಸಾಧಾರಣವಾಗಿ ಶರೀರವನ್ನು ನಡೆಸುತ್ತಾ ಜೀವಿಗೆ ಕಷ್ಟಸುಖಗಳನ್ನು ಒದಗಿಸುತ್ತಿರುತ್ತಾನೆ. ಅಂತಹ ಸ್ಥಿತಿಯಲ್ಲಿ ಆ ವ್ಯಕ್ತಿಯದ್ದು ಪ್ರತ್ಯೇಕವಾದ ಜನ್ಮ ಎಂದು ಯಾರಿಗೂ ಗುರುತು ಇಲ್ಲದಂತೆ ಹೋಗುತ್ತದೆ. ಹೊರಗಿನ ಶರೀರವನ್ನು ಸರ್ವಸಾಧಾರಣವಾಗಿ ನಡೆಸುವ ಆತ್ಮ ಪರಮಾತ್ಮ ನೊಂದಿಗೆ ಸಂಬಂಧ ಪಟ್ಟಿರುವುದರಿಂದ, ಪರಮಾತ್ಮನ ಸ್ವಲ್ಪಮಟ್ಟಿನ ಅಂಶ ಆತ್ಮದೊಂದಿಗೆ ಕೂಡಿರುವುದರಿಂದ, ಪರಮಾತ್ಮ ಜ್ಞಾನವನ್ನು ಆತ್ಮ ಶರೀರದ ಮೂಲಕ ತಿಳಿಸುತ್ತಿದೆ. ಪರಮಾತ್ಮ ಜ್ಞಾನ ಪರಮಾತ್ಮನಿಗೆ ಹೊರತು ಆತ್ಮಗೂ ಸಹ ತಿಳಿಯುವುದಿಲ್ಲ. ಆದ್ದರಿಂದ ಎಲ್ಲಾ ಶರೀರದಲ್ಲಿರುವ ಆತ್ಮ ದೇವರ

ಜ್ಞಾನವನ್ನು ಹೇಳುವುದಿಲ್ಲ. ಒಂದು ಪರಮಾತ್ಮ ಅಂಶ ಹೊಂದಿದ ಆತ್ಮ ಮಾತ್ರ ದೇವರ ಜ್ಞಾನವನ್ನು ತಿಳಿಸುತ್ತಿದೆ. ದೇವರ ಅಂಶ ಹೊಂದಿರುವ ಆತ್ಮವೂ ಸಹ ಒಂದು ಶರೀರದಲ್ಲಿ ಇರುವುದರಿಂದ ಆ ಶರೀರದಿಂದ ದೈವಜ್ಞಾನ ಹೊರಬರುತ್ತಿದೆ. ಯಾವ ಶರೀರದಲ್ಲಿ ಯಾವ ಆತ್ಮ ವಾಸಿಸುತ್ತಿರುವುದು ಯಾರಿಗೂ ತಿಳಿದಿಲ್ಲ. ಆದ್ದರಿಂದ ಇಂತಹ ಶರೀರದಿಂದ ಹೇಳಲ್ಪಡುವುದೇ ನಿಜವಾದ ದೈವಜ್ಞಾನವೆಂದು ಯಾರು ಕಂಡುಕೊಳ್ಳುವುದಿಲ್ಲ. ಪರಮಾತ್ಮ ಅಂಶದಿಂದ ಕೂಡಿದ ಆತ್ಮ ಧರಿಸಿದ ಶರೀರವು ಭೂಮಿಮೇಲೆ ಅಪರೂಪವಾಗಿ ಹುಟ್ಟುತ್ತದೆ.

ದೈವಾಂಶವಿರುವ ಶರೀರದಲ್ಲಿ ಆತ್ಮ, ಜೀವಾತ್ಮ ಮತ್ತು ಪರಮಾತ್ಮ ಇದ್ದರೂ, ಆ ಶರೀರವು ಸರ್ವಸಾಧಾರಣವಾಗಿ ಕಾಣಿಸಿದರೂ, ನಿಮಗೆ ತಿಳಿಯದ ಪ್ರತ್ಯೇಕತೆ ಆ ಶರೀರಕ್ಕಿದೆ. ಸಾಧಾರಣ ಮನುಷ್ಯ ಜನ್ಮಿಸಿದಾಗ ಶಿಶುಶರೀರವು ತಾಯಿಗರ್ಭದಿಂದ ಹುಟ್ಟಿದ ನಂತರ, ಕದಲಿಕೆಯಿಲ್ಲದ ಶಿಶುಶರೀರದೊಳಗೆ ಆತ್ಮ ಜೀವಾತ್ಮದೊಂದಿಗೆ ಬಂದು ಸೇರುತ್ತದೆ. ಒಂದು ಪ್ರದೇಶದಲ್ಲಿ ಮರಣಿಸಿದ ಜೀವಿಯು ಆತ್ಮದೊಂದಿಗೆ ಸಹ ಸೇರಿಬಂದು ಆಗಲೇ ಹುಟ್ಟಿದ ಶಿಶುವಿನಲ್ಲಿ ಸೇರುವುದು ನಡೆಯುತ್ತಿದೆ. ಜನ್ಮಿಸಿದ ಶಿಶು ಶರೀರದೊಳಗೆ ಜೀವಾತ್ಮ, ಆತ್ಮ ಸೇರುವುದು ಸರ್ವಜೀವರಾಶಿಗಳಿಗೂ ನಡೆಯುವ ವಿಧಾನವಾಗಿದೆ. ಆದರೆ ದೈವಾಂಶವಿರುವ ಆತ್ಮ ಹುಟ್ಟುವಾಗ ಶಿಶು ಶರೀರವು ತಾಯಿ ಗರ್ಭದಲ್ಲಿ ಇರುವಾಗಲೆ ಆ ಶರೀರದಲ್ಲಿ ಆತ್ಮ ಜೀವಾತ್ಮ ಇರುತ್ತದೆ. ಶಿಶುವು ಹುಟ್ಟುವುದಕ್ಕಿಂತ ಮೊದಲೇ ತಾಯಿಗರ್ಭದಲ್ಲಿಯೇ ಆತ್ಮ ಇರುವುದು ಒಂದೇ ಒಂದು ದೈವಾಂಶ ವಿರುವ ಶರೀರದಲ್ಲಿ ಮಾತ್ರವೇ ನಡೆಯುತ್ತದೆ. ಅದನ್ನು ಅಪರೂಪವಾದ ಜನ್ಮವಾಗಿ ಭಾವಿಸುತ್ತಿದ್ದೇವೆ. ಅಂತಹ ಜನ್ಮ ಕೆಲವು ಸಾವಿರಾರುವರ್ಷಗಳಿಗೊಮ್ಮೆ ಇಲ್ಲವೇ ಕೆಲವು ಲಕ್ಷಗಳ ವರ್ಷಗಳಿಗೊಮ್ಮೆ ನಡೆಯುತ್ತಿರುತ್ತದೆ. ಭೂಮಿಮೇಲೆ ಅಜ್ಞಾನ ಬೆಳೆದುಹೋಗಿ, ಜ್ಞಾನ ತಿಳಿಯದಂತೆ ಹೋದಾಗ, ಅಜ್ಞಾನವನ್ನೇ ಜ್ಞಾನವಾಗಿ, ಜ್ಞಾನವನ್ನೇ ಅಜ್ಞಾನವಾಗಿ ಹೇಳಿಕೊಳ್ಳುವವರಿರುವಾಗ, ಮನುಷ್ಯರು

ಯಾರೂ ಇದು ನಿಜವಾದ ಜ್ಞಾನವೆಂದು ಹೇಳಲಾರರು. ಅಂತಹ ಸಮಯದಲ್ಲಿ ದೇವರೇ ತನ್ನ ಜ್ಞಾನವನ್ನು ಹೇಳಬೇಕಾಗಿದೆ. ದೇವರೆ ತಾನು ಸ್ವತಃವಾಗಿ ಕೆಲಸಮಾಡದವನು ಆದ್ದರಿಂದ ದೇವರು ಪ್ರತ್ಯೇಕವಾದ ವಿಧಾನವನ್ನು ಅನುಸರಿಸಿ ತನ್ನ ಅಂಶವಾದ ಆತ್ಮದಿಂದ ಜ್ಞಾನವನ್ನು ಹೇಳಿಸುತ್ತಾನೆ.

ಮುಖ್ಯವಾಗಿ ಈಗ ಹೇಳುವ ಸತ್ಯವೇನೆಂದರೆ! ದೈವಾಂಶವಿರುವ ಆತ್ಮವಿರುವ ಶರೀರವು ಹೊರಗೆ ಯಾರಿಗೂ ಗುರುತು ಇಲ್ಲದಂತೆ ಇರುತ್ತದೆ. ಆದರೆ ಪ್ರಬೋಧಾನಂದ ಯೋಗೀಶ್ವರರೂ ಸಹ ಇತರರು ನೋಡುವುದಕ್ಕೆ ಯಾವ ಗುರುತು ಇಲ್ಲದವನಾದರೂ ದೇವರು ಮಾತ್ರ ಆತನಿಗೆ ಕೆಲವು ಗುರುತುಗಳನ್ನು, ಯೋಚಿಸುವವರಿಗೆ ಮಾತ್ರವೇ ತಿಳಿಯುವಂತೆ ಇಟ್ಟಿದ್ದಾನೆ. ಒಂದುಕಡೆ ಪ್ರಬೋಧಾನಂದ ಹೇಳುವ ಜ್ಞಾನ ಉತ್ತಮವಾದುದೇನು ಅಲ್ಲ ಎಂಬುವಂತೆ ಮಾಡಿ, ಕೆಲವರಿಗೆ ಮಾತ್ರ ಆತನು ಹೇಳುವ ಜ್ಞಾನ ನಿಜವಾದುದೆಂದು ತಿಳಿಯುವುದಕ್ಕೆ ಕೆಲವು ಪ್ರತ್ಯೇಕತೆಗಳು ಏರ್ಪಡಿಸಿದ್ದಾನೆ. ಆತನ ಜ್ಞಾನವನ್ನು ಬಹಳಜನ ಗುರುತಿಸದಂತೆ, ಪ್ರಬೋಧಾನಂದ ಹುಟ್ಟಿದ ವಿಕೃತಿ ನಾಮ ಸಂವತ್ಸರದಿಂದ ನಂತರ ವಿಕೃತಿ ನಾಮ ಸಂವತ್ಸರ ಬರುವವರೆಗೂ ಆರವತ್ತು (60) ವರ್ಷಗಳಲ್ಲಿ ಸೃಷ್ಟಿ ಆದಿಯಿಂದ ಇಲ್ಲದ ನಾಗರಿಕತೆಯನ್ನು, ವಿಜ್ಞಾನವನ್ನು (ಸೈನ್ಸ್) ದೇವರು ಪ್ರಪಂಚದಲ್ಲಿ ಅಭಿವೃದ್ಧಿ ಮಾಡಿದ್ದಾನೆ. ವಿಜ್ಞಾನ ಬೆಳೆಯುವುದರಿಂದ ಯಂತ್ರಗಳಿಂದ ವಿಪರೀತ ಸುಖಗಳನ್ನು ಹೊಂದುವ ಮನುಷ್ಯ ದೇವರನ್ನು, ದೇವರ ಜ್ಞಾನವನ್ನು ನಂಬಲಾರದ ಸ್ಥಿತಿಗೆ ಸೇರಿ ಕೊಂಡಿದ್ದಾನೆ. ಎಲ್ಲವನ್ನು ಮನುಷ್ಯನೇ ಮಾಡುತ್ತಿದ್ದಾನೆಂದು ದೇವರ ಪಾತ್ರ ಏನು ಇಲ್ಲ ಎನ್ನುವವರು ಬಹಳಜನ ತಯಾರಾಗಿದ್ದಾರೆ. 60 ಲಕ್ಷ ವರ್ಷಗಳಿಂದ ಇಲ್ಲದ ಅಭಿವೃದ್ಧಿ 60 ವರ್ಷಗಳಲ್ಲಿ ಬಂದಿದೆಯೆಂದು ಯಾರಾದರು ಒಪ್ಪಿಕೊಳ್ಳದೆ ತಪ್ಪಲ್ಲ. ಇದು ಭೂಮಿಮೇಲೆ ದೇವರ ಜ್ಞಾನ ಗುರುತು ಹೊಂದದಂತೆ ಹೋಗುವುದಕ್ಕೆ ದೊಡ್ಡ ಆತಂಕವನ್ನು ಒಂದುಕಡೆ ದೇವರೇ ಸೃಷ್ಟಿಸಿದ್ದಾನೆಂದು ಹೇಳಬಹುದು. ಒಂದುಕಡೆ ತನ್ನಮೇಲೆ ಆಸಕ್ತಿ ಇರುವವರು ಮಾತ್ರವೇ ದೈವಜ್ಞಾನವನ್ನು ಗುರುತಿಸುವಂತೆ ಪ್ರಬೋಧಾನಂದ ಜನ್ಮಕ್ಕೆ ಕೆಲವು ಪ್ರತ್ಯೇಕತೆಗಳನ್ನು

ದೇವರು ಕಲ್ಪಿಸಿದ್ದಾನೆ. ಆತನು ಸಾಧಾರಣ ಮನುಷ್ಯನೆ ಎನ್ನುವಂತೆ ಆತನ ಜೀವನವನ್ನು ಅಳವಡಿಸಿದರೂ, ಆತನು ಎಲ್ಲರಂತೆ ಸಾಮಾನ್ಯನಲ್ಲ ಎನ್ನುವಂತೆ ಆತನ ಶರೀರದ ಮೇಲೆ ಎರಡು ಗುರುತುಗಳನ್ನು ಇಡಲಾಗಿದೆ. ಆ ಗುರುತುಗಳಿರುವ ಮನುಷ್ಯನ ಜೊತೆ ಯಾರು ಶತ್ರುತ್ವವು ಮಾಡಿದರೂ ಅವರು ಎಲ್ಲ ವಿಧಗಳಲ್ಲಿ ಭ್ರಷ್ಟರಾಗಿಹೋಗುತ್ತಾರೆ. ಆ ಗುರುತುಗಳ ಮಹತ್ವ ಯಾರಿಗೂ ತಿಳಿದಿಲ್ಲ. ಮನುಷ್ಯನ ಶರೀರದಲ್ಲಿ ಅಪರೂಪವಾಗಿರುವ ಆ ಗುರುತುಗಳು ಪ್ರಬೋಧಾನಂದ ಶರೀರದಲ್ಲಿರುವುದು ಒಂದು ಪ್ರತ್ಯೇಕತೆ. ಆತನಿಗೆ ಭೌತಿಕ ಶರೀರದ ಮೇಲಿರುವ ಭೌತಿಕ ಗುರುತುಗಳು ಆತನನ್ನು ದ್ವೇಷ ಭಾವದಿಂದ ನೋಡಿದವರನ್ನು ಹೀನಸ್ಥಿತಿಗೆ, ಅಜ್ಞಾನಸ್ಥಿತಿಗೆ ಸೇರಿಸುತ್ತವೆಂದು, ಪೂಜ್ಯಭಾವದಿಂದ ನೋಡಿದವರನ್ನು ಉನ್ನತ ಸ್ಥಿತಿಗೆ, ಜ್ಞಾನಸ್ಥಿತಿಗೆ ಸೇರಿಸುತ್ತ ವೆಂದು ಹೇಳಬಹುದು. ಇದರಿಂದ ಆತನ ಶರೀರಕ್ಕೆ ಹುಟ್ಟಿನಿಂದಲೇ ಬಂದಿರುವ ಭೌತಿಕ ಗುರುತುಗಳಿಗೆ ಅಭೌತಿಕವಾದ ಪ್ರಭಾವವಿದೆಯೆಂದು ಸಹ ಹೇಳಬಹುದು.

ಆತನು ಹುಟ್ಟಿದ ವಂಶದ ಹೆಸರು ಸಹ ಒಂದು ಪ್ರತ್ಯೇಕವಾದುದು. ಒಂದು ವಿಧವಾಗಿ ಹೇಳಬೇಕೆಂದರೆ ಪ್ರಬೋಧಾನಂದ ಹುಟ್ಟುವುದಕ್ಕಾಗಿಯೇ ಆ ಹೆಸರಿರುವ ವಂಶವು ಭೂಮಿಮೇಲೆ ತಯಾರು ಮಾಡಲಾಗಿದೆ ಎಂದು ಹೇಳಬಹುದು. ಆತನ ಶರೀರವು ಸರ್ವಸಾಧಾರಣವಾಗಿ ಕಾಣಿಸಿದಂತೆ, ಆತನ ವಂಶವೂ ಸಹ ಸಾಧಾರಣವಾಗಿಯೇ ಕಾಣಿಸಿದರೂ ಅದರ ಒಳಗೆ ಎಷ್ಟೋ ರಹಸ್ಯವು ಅಡಿಗಿದೆ. ಅದನ್ನು ವಿವರಿಸಿಕೊಂಡರೆ ಹೀಗೆ ಇದೆ. ಮನುಷ್ಯನ ಶರೀರದಲ್ಲಿ ಮೂರು ಆತ್ಮಗಳು ಇವೆಯೆಂದು ತಿಳಿಸಿದವನೇ ತ್ರೈತಸಿದ್ಧಾಂತ ಕರ್ತ. ತ್ರೈತ ಸಿದ್ಧಾಂತವನ್ನು ತಿಳಿಸಿದವನು ಪ್ರಬೋಧಾನಂದ ಯೋಗೀಶ್ವರರು, ಆದ್ದರಿಂದ ಆತನು ಹುಟ್ಟಿದ ವಂಶವು ಸಹ ತ್ರೈತ ಸಿದ್ಧಾಂತವನ್ನು ಹೊಂದಿರುವುದಾಗಿದೆ. ತ್ರೈತಸಿದ್ಧಾಂತದಲ್ಲಿ ಪರಮಾತ್ಮ, ಆತ್ಮ, ಜೀವಾತ್ಮ ಎನ್ನುವ ಮೂರು ಆತ್ಮಗಳಿವೆ ಎಂದು ಪ್ರಬೋಧಾನಂದ ಯೋಗೀಶ್ವರರೇ ತಿಳಿಸಿದ್ದಾನೆ. ಇಲ್ಲಿ ಮೂರು ಆತ್ಮಗಳ ವರಸೆ ಕ್ರಮದಲ್ಲಿ ಜೀವಾತ್ಮದಿಂದ ಶುರುಮಾಡಿ ಆತ್ಮ,

ಪರಮಾತ್ಮದವರೆಗೂ ಹೇಳಬಹುದು. ಇಲ್ಲದಿದ್ದರೆ ಪರಮಾತ್ಮದಿಂದ ಪ್ರಾರಂಭಿಸಿ ಆತ್ಮ, ಜೀವಾತ್ಮ ಎಂದೂ ಸಹ ಹೇಳಬಹುದು. ಆದರೆ ಸರ್ವಸಾಧಾರಣ ಮನುಷ್ಯರ ವಿಷಯದಲ್ಲಿ ಹೇಳಿದಾಗ ಜೀವಾತ್ಮ, ಆತ್ಮ, ಪರಮಾತ್ಮ ಎಂದು ಹೇಳಬೇಕು. ಅದೇ ಪ್ರತ್ಯೇಕವಾದ ದೈವಾಂಶವಿರುವ ಮನುಷ್ಯನಲ್ಲಿ ಹೇಳುವಾಗ ಪರಮಾತ್ಮ, ಆತ್ಮ, ಜೀವಾತ್ಮ ಎಂದು ಹೇಳಬೇಕು. ಎರಡು ವಿಧಗಳ ಮನುಷ್ಯರಲ್ಲಿ ಆತ್ಮ ಮಧ್ಯದಲ್ಲಿರುವುದು ಗಮನಿಸಬೇಕಾದ ವಿಷಯ. ಪರಮಾತ್ಮ ಇಲ್ಲವೆ ದೇವರು ಎಲ್ಲರಿಗಿಂತ, ಎಲ್ಲದಕ್ಕಿಂತ ದೊಡ್ಡವನಾದ್ದರಿಂದ ಗಣಿತ ಶಾಸ್ತ್ರದಲ್ಲಿನ ಸಂಖ್ಯೆಗಳಲ್ಲಿ ಎಲ್ಲದಕ್ಕಿಂತ ದೊಡ್ಡ ಸಂಖ್ಯೆ ಒಂಭತ್ತು (9) ಆದ್ದರಿಂದ ಪರಮಾತ್ಮನ ಗುರುತಾಗಿ 9ನ್ನು ಹೇಳುವುದು ನಡೆದಿದೆ. ಪರಮಾತ್ಮ ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದಾನೆನ್ನುವುದಕ್ಕೆ ಗುರುತಾಗಿ 9 ನ್ನು ಮೂರು ಸಮಾನ ಭಾಗಗಳು ಮಾಡಿದರೆ ಆತ್ಮ ಗುರುತಾಗಿ ಆರು (6)ನ್ನು, ಜೀವಾತ್ಮ ಗುರುತಾಗಿ ಮೂರು (3)ನ್ನು ಹೇಳಬಹುದು. ಆದ್ದರಿಂದ ಸೃಷ್ಟಿಕರ್ತ 9,6,3 ಎಂದು ಪ್ರಬೋಧಾನಂದ ರಚನೆಯಲ್ಲಿ ಬರೆಯಲಾಗಿದೆ. ಈ ಸೂತ್ರವನ್ನು ಅನುಸರಿಸಿ ಒಬ್ಬ ಅಜ್ಞಾನಿ ವಿಷಯದಲ್ಲಿ 369 ಎಂದು, ಒಬ್ಬ ಜ್ಞಾನಿ ವಿಷಯದಲ್ಲಿ 963 ಎಂದು ಹೇಳಬೇಕೆಂದು ಇದೆ. ಪ್ರತ್ಯೇಕವಾದ, ದೈವಾಂಶ ಹೊಂದಿದ ಪ್ರಬೋಧಾನಂದ ವಿಷಯದಲ್ಲಿ 963 ಎಂದೇ ಹೇಳಬೇಕು.

ಅಂಕೆಗಳಲ್ಲಿ ದೊಡ್ಡಸಂಖ್ಯೆ '9' ನ್ನು ಪರಮಾತ್ಮ ಗುರುತಾಗಿ ತೆಗೆದುಕೊಂಡಿದ್ದೇವೆ. ಹಾಗೆಯೇ ಅಕ್ಷರಗಳಲ್ಲಿ ರಹಸ್ಯವಾದ ದೇವರ ಗುರುತಾಗಿರುವ 'ಗು' ಎಂಬ ಅಕ್ಷರವನ್ನು ತೆಗೆದುಕೊಳ್ಳುತ್ತಿದ್ದೇವೆ. ಪ್ರಬೋಧಾನಂದನದು ಪ್ರತ್ಯೇಕವಾದ ಜನ್ಮ ಆದ್ದರಿಂದ **ಗು** ಎಂಬ ಅಕ್ಷರದಿಂದ ಪ್ರಾರಂಭವಾಗುವ ಹೆಸರಿರುವ ವಂಶದಲ್ಲಿಯೇ ಹುಟ್ಟಬೇಕು. **ಗು** ಎಂಬ ಅಕ್ಷರದಿಂದ ಪ್ರಾರಂಭವಾಗುವ ಎಷ್ಟೋ ವಂಶಗಳ ಹೆಸರುಗಳಿವೆ. ಆದರೆ ಅವುಗಳಲ್ಲಿ ಹುಟ್ಟದಂತೆ ಒಂದು **ಗುತ್ತಾ** ಎಂಬ ಹೆಸರಿರುವ ವಂಶದಲ್ಲಿ ಹುಟ್ಟುವುದಕ್ಕೆ ಸ್ವಲ್ಪ ಕಾರಣವಿದೆ. ಅದೇನೆಂದರೆ! ಪ್ರತಿ ಶರೀರದಲ್ಲಿಯೂ ಆತ್ಮ ಜೀವಾತ್ಮಗಳು ಜೋಡಿಯಾಗಿ ಇರುತ್ತವೆ. ಆದ್ದರಿಂದ ಜೋಡಿಯಾಗಿರುವ ಅಕ್ಷರವಿರುವ **ತ್ತಾ** ಎಂಬ ಎರಡನೆ

ಅಕ್ಷರವಿರುವ ಗುತ್ತಾ ವಂಶದಲ್ಲಿಯೇ ಆತನು ಹುಟ್ಟುವುದು ನಡೆದಿದೆ. ಜೀವಾತ್ಮನಿಗಿಂತ ಆತ್ಮ ದೊಡ್ಡದೆಂಬ ವಿಷಯವನ್ನು ತಿಳಿಸುವುದಕ್ಕೆ ದೀರ್ಘವಿರುವ "ತಾ" ನ್ನು ಆತ್ಮವಾಗಿ ಹೋಲಿಸಿ ಚಿಕ್ಕದಾದ ಜೀವಾತ್ಮವನ್ನು"ತ" ಗೆ ಹೋಲಿಸಿ, ಎರಡು ಅಕ್ಷರಗಳ ಜೋಡಿಯಾಗಿ ರುವ ತ್ತಾ "ಗು" ಪಕ್ಕದಲ್ಲಿಟ್ಟಿರುವ ಗುತ್ತಾ ವಂಶವನ್ನು ಆಯ್ಕೆ ಮಾಡಿಕೊಳ್ಳುವುದು ನಡೆದಿದೆ. ಮೂರು ಆತ್ಮಗಳ ಗುರುತನ್ನು ಪ್ರತಿ ಮನುಷ್ಯನ ಹಸ್ತದಲ್ಲಿಯೂ, ಕಣ್ಣಿನಲ್ಲಿಯೂ, ದೇವರು ಗುರುತಿಗಾಗಿ ಇಟ್ಟಿದ್ದಾನೆ. ಹಸ್ತದಲ್ಲಿರುವ ಮೂರು ರೇಖೆಗಳು ಮೂರು ಆತ್ಮಗಳಾಗಿ ಗುರುತು ಹೊಂದಿವೆ. ಹಸ್ತದಲ್ಲಿನ ಮೂರು ರೇಖೆಗಳನ್ನು ನಂತರ ಪುಟದಲ್ಲಿ ನೋಡಿರಿ.

ಪರಮಾತ್ಮನಿಗೆ ಗುರುತಾಗಿರುವ ಮೇಲಿನ ರೇಖೆ ಗು ಎಂಬ ಅಕ್ಷರವಾಗಿ ಗುರುತಿಸಿದಾಗ, ಕೆಳಗೆ ಸೇರಿರುವ ಎರಡು ರೇಖೆಗಳಲ್ಲಿ ಉದ್ದವಾದ ಮೊದಲ ರೇಖೆ ಆತ್ಮವಾಗಿ ಗುರುತಿಸಿದಾಗ, ಕೆಳಗಿರುವ ರೇಖೆಯನ್ನು ಜೀವಾತ್ಮವಾಗಿ ಗುರುತಿಸುವುದು ನಡೆದಿದೆ. ಮೇಲಿನ ರೇಖೆಗೆ "ಗು" ಅನ್ನು ಕೆಳಗಿನ ರೇಖೆಗೆ "ತಾ"ಅನ್ನು ಅದಕ್ಕಿಂತ ಕೆಳಗಿನ ರೇಖೆಗೆ ದೀರ್ಘವಿಲ್ಲದ "ತ" ವನ್ನು ಗುರುತಿಸುವುದು ನಡೆದಿದೆ. ಕೆಳಗೆ ಎರಡು ರೇಖೆಗಳು ಸೇರಿರುವುದರಿಂದ 'ತಾ' ಕೆಳಗೆ 'ತ' ಅನ್ನು ಇಡಲಾಗಿದೆ. ಹಾಗೆ ಇಡುವುದರಿಂದ ಒಂದೇ ಜೋಡಿಯಾಗಿರುವ ಆತ್ಮ ಜೀವಾತ್ಮಗಳು "ತ್ತಾ"ಆಗಿ ಏರ್ಪಟ್ಟಾಗ, ಮೇಲಿರುವ ರೇಖೆ ಗುರುತು "ಗು" ಅನ್ನು, ತ್ತಾ ಮುಂದೆ ಇಟ್ಟರೆ ಗುತ್ತಾ ಆಗಿದೆ. ಈ ವಿಧವಾಗಿ ಪರಮಾತ್ಮ ಆತ್ಮ, ಜೀವಾತ್ಮಗಳ ಸಾರಾಂಶವನ್ನು ತಿಳಿಸುವುದು "ಗುತ್ತಾ" ಎಂಬ ಪದವು, ಆದ್ದರಿಂದ ಗುತ್ತಾ ಎಂಬ ಹೆಸರಿರುವ ವಂಶದಲ್ಲಿಯೇ ಪ್ರಬೋಧಾನಂದ ಹುಟ್ಟುವುದು ನಡೆದಿದೆ. ಆತನ ಜೀವನವು ಒಂದುಕಡೆ ಮನುಷ್ಯರು ಗುರುತಿಸಲಾರದ ವಿಧಾನದಿಂದ ಇದ್ದರೂ, ಒಂದು ಕಡೆ ಜ್ಞಾನಸಂಬಂಧದ ಬೆಲೆಯು ಹೊರಗೆ ಕಾಣಿಸುವಂತೆ ದೇವರೇ ಅಳವಡಿಸಿದ್ದಾನೆ. ಈ ವಿಧವಾಗಿ ಆತನು ಹುಟ್ಟಿದ ವರ್ಷ ಪ್ರತ್ಯೇಕವಾದ ಅರ್ಥವಿರುವುದು, ಹಾಗೆಯೇ ಆತನು ಹುಟ್ಟಿದ ವಂಶವು ಉತ್ತಮವಾದದ್ದೆ, ಈಗ ಆತನು ಹುಟ್ಟಿದ ಕುಲವನ್ನು ಕುರಿತು ಹೇಳಿಕೊಳ್ಳೋಣ.




<u>**ಮೂರು ಆತ್ಮಗಳ ಗುರುತು**</u>



ಗುತ್ತಾ ಎಂಬ ವಂಶ ರೆಡ್ಡಿ ಕುಲದಲ್ಲಿ ಮತ್ತು ಕಮ್ಮ (ಚೌದರಿ) ಕುಲದಲ್ಲಿ ಇದೆ. ರೆಡ್ಡಿ ಕುಲದಲ್ಲಿರುವ ಗುತ್ತಾವಂಶದಲ್ಲಿ ಪ್ರಬೋಧಾನಂದ ಹುಟ್ಟಿದಂತೆ, ಕಮ್ಮ ಕುಲದಲ್ಲಿರುವ ಗುತ್ತಾವಂಶದಲ್ಲಿ ಹುಟ್ಟಿದ್ದಾನೆ. ಅದಕ್ಕಿರುವ ಕಾರಣ ತಿಳಿಯಬೇಕೆಂದರೆ ಮೊದಲು ಕಮ್ಮ ಕುಲವನ್ನು ಕುರಿತು ತಿಳಿದುಕೊಳ್ಳೋಣ. ಪೂರ್ವದಲ್ಲಿ ಎಗುವ(ಮೇಲ್ಜಾತಿ), ದಿಗುವ (ಕೆಳಜಾತಿ) ಎನ್ನುವ ಎರಡು ಸಮಾಜಗಳು ಎರಡು ಕುಲಗಳಾಗಿ ಇದ್ದವು. ದೈವಜ್ಞಾನ ಇರುವವರು ಮೇಲಿನವರೆಂದು (ಮೇಲ್ಜಾತಿಯವರೆಂದು) ಕರೆಯುತ್ತಿದ್ದರು. ದೈವಜ್ಞಾನ ಇಲ್ಲದವರನ್ನು ನಮ್ಮ ದಿಗುವದವರು (ಮಾದಿಗರೆಂದು) ಕರೆಯುತ್ತಿದ್ದರು. ಎಗುವದವರು ಬ್ರಹ್ಮಜ್ಞಾನ ತಿಳಿದವರೆಂದು ಬ್ರಾಹ್ಮಣರಾಗಿ ಕರೆಯಲ್ಪಡುತ್ತಿದ್ದರು. ಜ್ಞಾನವಿಲ್ಲದವರೆಲ್ಲರನ್ನು ಮಾದಿಗ (ನಮ್ಮ ಕೆಳಗಿನ) ಕುಲವೆಂದು ಬ್ರಾಹ್ಮಣರು ಹೇಳುವುದರಿಂದ, ಮಾ ದಿಗರು ಎಂಬ ಪದವು ಒಂದು ಕುಲವಾಗಿ ಏರ್ಪಟ್ಟಿದೆ. ಬ್ರಾಹ್ಮಣರಿಂದ ಮಾದಿಗರೆಂದು ಕರೆಸಿಕೊಳ್ಳುವ ಸಮಾಜದಿಂದ ಒಬ್ಬೊಬ್ಬರು ಒಂದೊಂದು ಕೆಲಸವನ್ನು ಮಾಡುವುದಕ್ಕೆ ಅಭ್ಯಾಸಮಾಡಿಕೊಳ್ಳುವುದರಿಂದ ಬಟ್ಟೆ ಹೊಗೆಯುವವರನ್ನು ಅಗಸರೆಂದು, ತಲೆಕೂದಲು ತೆಗೆಯುವವರನ್ನು ಮಂಗಳರೆಂದು ಅವರವರು ಮಾಡುವ ಕೆಲಸಗಳನ್ನನುಸರಿಸಿ ದಿಗುವ ಕುಲದಿಂದ ಅನೇಕ ಕುಲಗಳು ಸೀಳಿಹೋಗಿವೆ. ಹೀಗೆ ಸೀಳಿಹೋಗಿ ಮಾ ದಿಗುವ ಕುಲವು ಸ್ವಲ್ಪ ಉಳಿದುಹೋಗಿದೆ. ಹೀಗೆ ಉಳಿದುಹೋದ **ಮಾದಿಗುವ ಕುಲವೆ** ಈದಿನ ಸ್ವಲ್ಪ ಹೆಸರು ಬದಲಾಗಿ **ಮಾದಿಗ** ಕುಲವಾಗಿ ಹೇಳಲಾಗುತ್ತಿದೆ. ಈ ಕುಲ ವ್ಯವಸ್ಥೆಯನ್ನು ಮೊದಲು ಬ್ರಾಹ್ಮಣರು ಏರ್ಪಡಿಸಿರುವುದೇ ಎಂದು ತಿಳಿಯಬೇಕು. ಈ ವಿಧವಾಗಿ ಏರ್ಪಟ್ಟಿರುವ ಅನೇಕ ಕುಲಗಳಲ್ಲಿ ಕಮ್ಮ ಕುಲವೂ ಸಹ ಒಂದು. 'ಇಂದೂ' ಎಂಬ ಶಬ್ದವು ಕಾಲ ಗಮನದಲ್ಲಿ 'ಹಿಂದೂ' ಎಂಬ ಶಬ್ದವಾಗಿ ಬದಲಾದಂತೆ, ಮುಂಬಾಯಿ 'ಬೊಂಬಾಯಿ' ಯಾಗಿ ಬದಲಾದಂತೆ ಮೊದಲು **ಅಮ್ಮಕುಲ** ವಾಗಿ ಹೆಸರುವಾಸಿಯಾದ ಕುಲವು ಕಾಲಕ್ರಮದಲ್ಲಿ **ಕಮ್ಮ ಕುಲ**ವಾಗಿ ಬದಲಾಗಿಹೋಗಿದೆ. ಮೊದಲು ಅಮ್ಮಕುಲ ಎನ್ನುವುದು ಹೇಗೆ ಬಂದಿದೆ ಎಂದರೆ!

ಪೂರ್ವದಲ್ಲಿ ದೈವಜ್ಞಾನ ತಿಳಿಯದ ದಿಗುವಿನವರಲ್ಲಿ ಕೆಲವರು ವ್ಯವಸಾಯದ ಮೇಲೆ ಗಮನಕೊಡುವವರಾಗಿ ಭೂಮಿಯನ್ನು ಉಳುಮೆಮಾಡಿ ಬೆಳೆಗಳು ಬೆಳೆಯುತ್ತಿದ್ದರು. ಆಗಿನಕಾಲದಲ್ಲಿ ಭೂಮಿಗಳೆಲ್ಲವೂ ಸಾರವಂತ ವಾಗಿರುವುದರಿಂದ, ಮಳೆ ಸಕ್ರಮವಾಗಿ ಬೀಳುತ್ತಿರುವುದರಿಂದ ಭೂಮಿಗಳೆಲ್ಲ ಚೆನ್ನಾಗಿ ಬೆಳೆಯುತ್ತಿದ್ದವು. ಈಗಿನಂತೆ ಆಗ ಧಾನ್ಯವನ್ನು ಮಾರುವಂತಹ ಮಾರುಕಟ್ಟೆಯ ವ್ಯವಸ್ಥೆ ಇರಲಿಲ್ಲ. ಧಾನ್ಯವನ್ನು ಕೊಟ್ಟು ಅವರಿಗೆ ಬೇಕಾದ ವಸ್ತುಗಳನ್ನು ತಂದುಕೊಳ್ಳುತ್ತಿದ್ದರು. ಧಾನ್ಯ ಬದಲಾವಣೆ ಬಿಟ್ಟು ಹಣ ಬದಲಾವಣೆ ಇಲ್ಲದಂತಿತ್ತು. ಆದ್ದರಿಂದ ಬೆಳೆದ ಧಾನ್ಯವನ್ನು ಭೂಮಿಯಲ್ಲಿನ ಪಾತ್ರೆಗಳಲ್ಲಿ ದಾಸ್ತಾನು ಮಾಡುತ್ತಿದ್ದರು. ಬೆಳೆದ ಧಾನ್ಯವು ವರ್ಷದೊಳಗೆ ಮುಗಿದು ಹೋಗುತ್ತಿರಲಿಲ್ಲ. ಹಾಗೆ ಧಾನ್ಯ ಉಳಿಯುವಂತೆ ಬೆಳೆಯುತ್ತಿರುವುದರಿಂದ ಉದಾರ ಸ್ವಭಾವದಿಂದ ಬಹಳಜನರಿಗೆ ಅನ್ನದಾನ ಮಾಡುತ್ತಿದ್ದರು. ಕೆಲವರಿಗೆ ಧಾನ್ಯವನ್ನೇ ಉಚಿತವಾಗಿ ಕೊಡುತ್ತಿದ್ದರು. ವ್ಯವಸಾಯ ಮಾಡದಂತೆ ಉಳಿದ ಕೆಲಸಗಳು ಮಾಡುವ ಎಲ್ಲಾ ಕುಲದವರಿಗೂ ಅಮ್ಮನಂತೆ ಆದರಿಸಿ ಅನ್ನ ಇಡುವ ಸಮಾಜಕ್ಕೆ ಅಮ್ಮಕುಲ ಎಂದು ಆ ದಿನ ಹೆಸರು ಬಂದಿದೆ. ಆ ದಿನ ಯಾರ ಮೇಲೆ ಎಂತಹ ದೌರ್ಜನ್ಯ ಮಾಡದಂತೆ, ಇತರರ ಬಗ್ಗೆ ಅನ್ಯಾಯವಾಗಿ ಪ್ರವರ್ತಿಸದಂತೆ, ಇಲ್ಲದವರೆಲ್ಲರನ್ನು ಪ್ರೀತಿಯಿಂದ ಮಾತನಾಡಿಸಿ, ಹಸಿವಿಗೆ ಅನ್ನ ಇಡುವ ಸಮಾಜವು ಅಮ್ಮಸಮಾಜವಾಗಿ, ಅದೇ ಅಮ್ಮಕುಲವಾಗಿ ಬದಲಾಗಿಹೋಗಿದೆ. ಆ ಕಾಲದಲ್ಲಿ ತಮ್ಮ ಭೂಮಿಯಲ್ಲಿ ತರಕಾರಿಯೊಂದಿಗೆ ಸಹ ಎಲ್ಲಾ ಬೆಳೆಗಳು ಬೆಳೆಸುತ್ತಾ ಬ್ರಾಹ್ಮಣರ ನಂತರ ಅಮ್ಮಕುಲದವರು ರುಚಿಯಾಗಿ ತಿನ್ನುತ್ತಿದ್ದರು. ಅವರು ರುಚಿಯಾಗಿ ತಿನ್ನುವುದಲ್ಲದೆ, ಇತರರಿಗೂ ಸಹ ರುಚಿಯಾಗಿಯೇ ಇಡುತ್ತಿದ್ದರು. ಆಹಾರವನ್ನು ಕಮ್ಮಗ (ರುಚಿಯಾಗಿ) ತಿನ್ನುವುದೇ ಅಲ್ಲದೆ ಇತರರಿಗೂ ಸಹ ರುಚಿಯಾಗಿ ಇಡುವುದರಿಂದ ಕಾಲಕ್ರಮವಾಗಿ ಅಮ್ಮಕುಲವು, ಕಮ್ಮ ಕುಲವಾಗಿ ರೂಪಾಂತರ ಹೊಂದಿದೆ.

ಪ್ರಬೋಧಾನಂದ ಯೋಗೀಶ್ವರರಿಗೆ ಯುಕ್ತವಯಸ್ಸು ಬಂದಾಗಿನಿಂದ ಪ್ರತಿ ದಿನವು ಸ್ವಲ್ಪಜನರಿಗಾದರೂ ಊಟ ಇಡುವ ಅಭ್ಯಾಸವಿದೆ. ಆಗಿನಿಂದ

ಈಗಿನವರೆಗೂ ಪೂರ್ವದಲ್ಲಿ ಅಮ್ಮಕುಲವು ಅನುಸರಿಸಿದ ವಿಧಾನದ ಪ್ರಕಾರ ಅನುಸರಿಸುವುದು ಆತನ ಸ್ವಭಾವದಲ್ಲಿ ಇರುವುದರಿಂದ ಆತನನ್ನು ಕಮ್ಮಕುಲದಲ್ಲಿಯೇ ಹುಟ್ಟಿಸುವುದು ನಡೆದಿದೆ. ಈಗಿನ ಕಮ್ಮಕುಲಸ್ಥರು ಕೆಲವರು ತಮ್ಮ ಪೂರ್ವದ ವಿಧಾನವನ್ನು ಮರೆತುಹೋಗಿ ಇತರರಿಗೆ ಅನ್ನ ಇಡುವ ಪದ್ಧತಿಯನ್ನು ಬಿಟ್ಟಿದ್ದಾರೆ. ಆದ್ದರಿಂದ ದೈವಿಕ ಅರ್ಥಕೊಡುವ ಗುತ್ತಾ ವಂಶದಲ್ಲಿ, ಪ್ರಪಂಚದಲ್ಲಿನ ವಿಧಾನವನ್ನು ತಿಳಿಸುವ ಕಮ್ಮ (ಅಮ್ಮ) ಕುಲದಲ್ಲೆ ಪ್ರಬೋಧಾನಂದ ಯೋಗೀಶ್ವರರು ಹುಟ್ಟುವುದು ನಡೆದಿದೆ. ಪ್ರಪಂಚದಲ್ಲಿ ಪ್ರಕೃತಿ ಸಂಬಂಧವಾದ ಅಮ್ಮ ವಿಧಾನವನ್ನು ಅಂದರೆ ಮಾಯ ವಿಧಾನವನ್ನು ಒಂದು ಕಡೆ ತೋರಿಸುವವನಾಗಿ ಕಮ್ಮಕುಲದಲ್ಲಿ, ಹಾಗೆಯೇ ಆಧ್ಯಾತ್ಮಿಕದಲ್ಲಿ ದೈವಿಕವಾದ ಮೂರು ಆತ್ಮಗಳನ್ನು ಗುರುತಿಸುವವನಾಗಿ ಗುತ್ತಾ ವಂಶದಲ್ಲಿ ಪ್ರಬೋಧಾನಂದ ಯೋಗೀಶ್ವರರು ಹುಟ್ಟುವುದು ನಡೆದಿದೆ.

ಪರಮಾತ್ಮ ಅಂಶದಿಂದ ಕೂಡಿಕೊಂಡ ಆತ್ಮ ಇರುವ ಮನುಷ್ಯ ಭೂಮಿಮೇಲೆ ಅಪರೂಪವಾಗಿ ಹುಟ್ಟುತ್ತಿರುತ್ತಾನೆ. ಅಂತಹ ಜನ್ಮ ಭೂಮಿಮೇಲೆ ನಡೆದಾಗ ಆ ಮನುಷ್ಯ ಎಲ್ಲರಿಗೂ ಸರ್ವಸಾಧಾರಣ ಮನುಷ್ಯನಾಗಿ ಕಾಣಿಸಿದರೂ, ಕೆಲವರು ಜ್ಞಾನಿಗಳು ಮಾತ್ರ ಅಂತಹ ಜನ್ಮದ ಪ್ರತ್ಯೇಕತೆಗಳನ್ನು ಗುರುತಿಸಬಲ್ಲರು. ಪರಮಾತ್ಮ ಅಂಶವಿದೆ ಎನ್ನುವುದಕ್ಕೆ ಏನು ನಿರೂಪಣೆ ಎಂಬ ಪ್ರಶ್ನೆಗೆ ಇಲ್ಲಿಯುವರೆಗೂ ಹುಟ್ಟಿದ ವರ್ಷ, ಹುಟ್ಟಿದ ವಂಶ, ಕುಲದ ಬಗ್ಗೆ ಹೇಳಿಕೊಂಡಿದ್ದೇವೆ. ಈಗ ಆತನು ಹುಟ್ಟಿದ ಸ್ಥಳವನ್ನು ಕುರಿತು ಹೇಳಿಕೊಳ್ಳೋಣ. ಪರಮಾತ್ಮ ಅಂಶ ಅಂತ್ಯವಿಲ್ಲದಿರುವುದು, ಅನಂತವಾದುದು. ಅಂತಹ ಅನಂತವಾದ ದೈವಾಂಶ "ಅನಂತ" ಎಂಬ ಹೆಸರಿರುವ ಊರಿನಲ್ಲಿಯೇ ಹುಟ್ಟಬೇಕೆಂದು ದೈವನಿರ್ಣಯ ಇರುವುದರಿಂದ ಅನಂತಪುರ ಎಂಬ ಹೆಸರಿರುವ ಊರಿನಲ್ಲಿಯೇ ಪ್ರಬೋಧಾನಂದ ಹುಟ್ಟುವುದು ನಡೆದಿದೆ. ಅನಂತಪುರದಲ್ಲಿ ನಿವಾಸಿಸುವವರಲ್ಲಿ ಅಜ್ಞಾನವಿದ್ದರೂ, ಅಲ್ಲಿನವರಲ್ಲಿ ಜ್ಞಾನ ಇಲ್ಲದಿದ್ದರೂ ಊರಿನ ಹೆಸರಿನಲ್ಲಿ ಮಾತ್ರ ದೈವ ಧರ್ಮವು ಇದೆ. ದೈವ ಅನಂತನು, ಆದ್ದರಿಂದ

ಅನಂತಪುರ ಎಂಬ ಹೆಸರಿನಲ್ಲಿ ಪರಮಾತ್ಮ ಅಂಶ ಹುಟ್ಟುವುದು ನಡೆಯಬೇಕಾಗಿದೆ. ಆದ್ದರಿಂದ ನಡೆದಿದೆಯೆಂದು ಹೇಳಬಹುದು.

ಪ್ರಬೋಧಾನಂದ ಯೋಗೀಶ್ವರರು ಅನಂತದಲ್ಲಿ ಹುಟ್ಟಿದಾಗ, ಪರಮಾತ್ಮ ಅಂಶಕ್ಕೆ ತಕ್ಕ ಹೆಸರೇ ನಿರ್ಣಯಿಸಲ್ಪಟ್ಟಿದೆ. ಪ್ರಪಂಚದಲ್ಲಿ ಅತಿ ರಹಸ್ಯವಾದವನು ದೇವರು. ಹಾಗೆಯೇ ಎಲ್ಲದಕ್ಕಿಂತ ದೊಡ್ಡವನು ದೇವರೆ. ದೇವರನ್ನು ಮೀರಿದವನಾಗಲಿ, ದೇವರಿಗೆ ಸಮಾನವಾದವನಾಗಲಿ ಭೂಮಿಮೇಲೆ ಯಾರೂ ಇಲ್ಲ. ಆದ್ದರಿಂದ ಎಲ್ಲರಿಗಿಂತ ಆತನೆ (ದೇವರೆ) ದೊಡ್ಡವನು, ದೊಡ್ಡವ ಎನ್ನುವ ಪದವನ್ನು ಬ್ರಹ್ಮ ಎಂದೂ ಸಹ ಕರೆಯಬಹುದು. ಬ್ರಹ್ಮ ಎಂದರೆ ದೊಡ್ಡವ ಎಂದು ಅರ್ಥ, ಆದ್ದರಿಂದ ದೇವರನ್ನು ಬ್ರಹ್ಮ ಎಂದೂ ಸಹ ಕರೆಯುತ್ತಿದ್ದೇವೆ. ದೇವರ ಅಂಶದಿಂದ ಕೂಡಿಕೊಂಡ ಆತ್ಮ ಪ್ರಬೋಧಾನಂದವಾಗಿ ಹುಟ್ಟಿದಾಗ, ಅಂತವಿಲ್ಲದ ಅಂಶವಾದ್ದರಿಂದ ಅನಂತದಲ್ಲಿ ಹುಟ್ಟುವುದು, ಎಲ್ಲರಿಗಿಂತ ದೊಡ್ಡವನಾದ್ದರಿಂದ ಹುಟ್ಟಿದಾಗ ಪೆದ್ದನ್ನ ಎಂಬ ಹೆಸರನ್ನು ಇಡಲಾಗಿದೆ. ಆತನ ಪ್ರತ್ಯೇಕತೆಯನ್ನು ಎಲ್ಲರೂ ಗಮನಿಸಿದಂತೆ ಅದೇ ಜಿಲ್ಲೆಯಲ್ಲಿ, ಅದೇ ಊರಿನಲ್ಲಿ ಹುಟ್ಟಿದ ಬಹಳಜನರಿಗೂ ಸಹ ಅಲ್ಲಲ್ಲಿ ಪೆದ್ದನ್ನ ಎಂಬ ಹೆಸರು ಇಡಲಾಗಿದೆ. ಆತನಿಗೆ ಯುಕ್ತವಯಸ್ಸು ಬಂದ ನಂತರ ಒಬ್ಬ ಸ್ವಾಮೀಜಿ ಹತ್ತಿರ ಮಂತ್ರೋಪದೇಶವನ್ನು ಪಡೆದಾಗ ಪ್ರಬೋಧಾನಂದ ಎಂದು ಹೆಸರು ಇಡಲಾಗಿದೆ. ಅಂದಿನಿಂದ ಪೆದ್ದನ್ನ ಎಂಬ ಹೆಸರು ಹೋಗಿ ಪ್ರಬೋಧಾನಂದ ಎಂಬ ಹೆಸರು ಬಂದಿದೆ. ಅಂದಿನಿಂದ ಪ್ರಪಂಚ ವ್ಯವಹಾರಗಳಲ್ಲಿ ಗುತ್ತಾ ಪ್ರಬೋಧಾನಂದ ಚೌದರಿಯಾಗಿ, ಆಧ್ಯಾತ್ಮಿಕ ವಿಷಯಗಳಲ್ಲಿ ಪ್ರಬೋಧಾನಂದ ಯೋಗೀಶ್ವರರಾಗಿ ಮುಂದುವರೆಯುವುದು ನಡೆದಿದೆ. ನಂತರ ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿದಾಗಿನಿಂದ ತ್ರೈತ ಸಿದ್ಧಾಂತ ಆದಿಕರ್ತ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರಾಗಿ ಚಲಾವಣೆ ಆಗುತ್ತಿದ್ದಾರೆ. ಎಷ್ಟೋ ಆಧ್ಯಾತ್ಮಿಕ ಗ್ರಂಥಗಳನ್ನು ಆತನು ಬರೆಯುವುದು ನಡೆದಿದೆ. ಇಲ್ಲಿಯವರೆಗು ಯಾರೂ ಬರೆಯದ ವಿಷಯಗಳನ್ನು ಮತ್ತು ಹೇಳದ ವಿಷಯಗಳನ್ನೇ ಬರೆಯುತ್ತೇನೆಂದು

ಹೇಳಿ ಬರೆಯುತ್ತಿದ್ದನು. ಒಂದು ಇಂದೂ (ಹಿಂದೂ) ಮತದಲ್ಲಿನ ಆಧ್ಯಾತ್ಮಿಕ ರಹಸ್ಯವನ್ನೆ ಅಲ್ಲದೆ, ಇಸ್ಲಾಂ ಮತ್ತು ಕ್ರೈಸ್ತರ ಮೂಲಗ್ರಂಥಗಳಾದ ಖುರಾನ್ ಮತ್ತು ಬೈಬಲ್ ಗ್ರಂಥಗಳಲ್ಲಿನ ಸೂಕ್ಷ್ಮಾತಿ ಸೂಕ್ಷ್ಮ ವಿಷಯಗಳನ್ನು ಸಹ ಸರಳವಾಗಿ ಹೇಳುತ್ತಿದ್ದನು. ಇತರ ಮತಗ್ರಂಥಗಳಲ್ಲಿನ ವಾಕ್ಯಗಳಿಗೆ ನೀವು ಹೇಗೆ ವಿವರವನ್ನು ಹೇಳುತ್ತಿದ್ದೀರೆಂದು ಕೇಳಿದಾಗ ಆತನು ಹೀಗೆ ಸಮಾಧಾನ ಹೇಳುತ್ತಿದ್ದನು. "ನಾನು ಗ್ರಂಥಗಳನ್ನು ನೋಡಿ ಏನು ಹೇಳಲಿಲ್ಲ. ನಾನು ಹೇಳುವುದೇ ಗ್ರಂಥಗಳಲ್ಲಿ ಬರೆಯಲ್ಪಟ್ಟಿತ್ತಿದೆ. ನನ್ನ ಬೋಧನೆಗಳಿಗೆ ವಿರುದ್ಧವಾದ ಧರ್ಮಗಳು ಯಾವ ಮೂಲ ಗ್ರಂಥಗಳಲ್ಲಿ ಇಲ್ಲ. ನನಗೆ ತಿಳಿಯದ ಆಧ್ಯಾತ್ಮಿಕ ರಹಸ್ಯಗಳು ಯಾವುವೂ ಇಲ್ಲ. ನನ್ನ ಧರ್ಮಗಳನ್ನು ಅನುಸರಿಸಿದ ಮೂಲಧರ್ಮಗಳೇ ಎಲ್ಲಾ ಗ್ರಂಥಗಳಲ್ಲಿ ಇವೆ" ಈ ಮಾತುಗಳನ್ನು ಕೇಳಿದವರು ಯಾರಾದರು, ಇವು ಸಾಮಾನ್ಯವಾದ ಮಾತುಗಳು ಅಲ್ಲ, ಹೇಳಿದವನು ದೊಡ್ಡ ವ್ಯಕ್ತಿ ಎನ್ನುವಂತೆ ಇದ್ದರೂ, ಎಲ್ಲರಿಗೂ ಆ ವಿಷಯ ಅರ್ಥವಾಗದಿರುವುದಕ್ಕೆ ಭೂಮಿಮೇಲೆ ಎಷ್ಟೋಜನ ಸ್ವಾಮೀಜಿಗಳು, ಎಷ್ಟೋಜನ ಬಾಬಾಗಳು ಬರುವುದೂ, ಅವರು ಅನೇಕ ಉಪನ್ಯಾಸಗಳು ಹೇಳುವುದೂ, ಅನೇಕ ಗ್ರಂಥಗಳು ಬರೆಯುವುದೂ ನಡೆದಿದೆ. ಪ್ರಬೋಧನಂದ ಹುಟ್ಟಿದ ನಂತರವೆ ವಿಪರೀತವಾಗಿ ಸ್ವಾಮೀಜಿಗಳು ತಯಾರಾಗುವುದರಿಂದ ಅವರಲ್ಲಿ ಪ್ರಬೋಧಾನಂದ ಸಹ ಒಬ್ಬ ಸ್ವಾಮೀಜಿಯಾಗಿ ಲೆಕ್ಕಿಸಲ್ಪಟ್ಟಿದ್ದಾನೆ. ಆದ್ದರಿಂದ ಯಾರು ಆತನನ್ನು ಪ್ರತ್ಯೇಕವಾಗಿ ಗುರುತಿಸಲಾರದೆಹೋಗಿದ್ದಾರೆ.

ಪ್ರಬೋಧಾನಂದ ಹೇಳುವ ಬೋಧನೆ ಮತಾತೀತವಾದುದಾಗಿ, ಎಲ್ಲ ಮತಗಳಲ್ಲಿನ ಪ್ರತಿ ಮನುಷ್ಯನಿಗೂ ಅನ್ವಯಿಸುವುದಾಗಿರುತ್ತಿತ್ತು. ಆತನ ಬೋಧನೆಯಲ್ಲಿ ಪ್ರಕೃತಿಗೆ ಅತೀತವಾದ ಪರಮಾತ್ಮ ಬೋಧನೆಗಳು ಇರುತ್ತಿದ್ದವು. ಆತನ ಬೋಧನೆಗಳು ದೈವದ ಮೇಲೆ ಆಸಕ್ತಿ ಇರುವವರಿಗೆ ಮಾತ್ರವೇ ಅರ್ಥವಾಗುತ್ತಿದ್ದವು. ದೈವದ ಮೇಲೆ ಅಲ್ಲದೆ ದೇಶದ ಮೇಲೆ, ಮತದ ಮೇಲೆ ಆಸಕ್ತಿ ಇರುವವರಿಗೆ ಅರ್ಥವಾಗುತ್ತಿರಲಿಲ್ಲ. ಆತನು ಬರೆದ ಗ್ರಂಥಗಳಲ್ಲಿ

ಕೆಲವುಗಳಲ್ಲಿ ಅಧಿಕವಾದ ದೈವಶಕ್ತಿ ಇರುತ್ತಿತ್ತು. ಅಂತಹ ಗ್ರಂಥಗಳನ್ನು ಓದಿದರೂ, ಇಲ್ಲವೇ ಭಕ್ತಿಯಿಂದ ಹತ್ತಿರ ಇಟ್ಟುಕೊಂಡರೂ ಕೆಲವು ವಿಧಗಳ ರೋಗಗಳು, ಕೆಲವು ಗ್ರಹಬಾಧೆಗಳು ತೊಲಗಿಹೋಗುತ್ತಿದ್ದವು. ರೋಗಗಳು, ಮೇಘಗಳು ಜೀವವಿರುವ ಜೀವರಾಶಿಗಳೆ ಎಂದು ಆತನು ಹೇಳುತ್ತಿದ್ದನು. ಇತರ ಶರೀರಗಳಲ್ಲಿರುವ ರೋಗಗಳನ್ನು ಮಾತನಾಡಿಸುತ್ತಿದ್ದನು. ಜ್ಞಾನಮಾರ್ಗದೊಳಗೆ ಬಂದವರನ್ನು ಬಿಟ್ಟುಹೋಗೆನ್ನುತ್ತಿದ್ದನು. ಆತನು ಹೇಳಿದಂತೇ ದೊಡ್ಡ ರೋಗಗಳೆಂದು ಹೆಸರುವಾಸಿಯಾದ ರೋಗಗಳು ಸಹ ಮಾತು ಕೇಳುತ್ತಿದ್ದವು. ಆತನ ಶರೀರದಲ್ಲಿ ಕೆಲವು ಲೋಪಗಳು ಏರ್ಪಟ್ಟು ಆರೋಗ್ಯದಲ್ಲಿ ಕೆಲವು ಬದಲಾವಣೆಗಳು ನಡೆದರೂ, ಅವು ರೋಗಗಳು ಅಲ್ಲದಿದ್ದರು ಅದರಿಂದ ಆತನ ಶರೀರವು ಮತ್ತೆ ಯಥಾಸ್ಥಿತಿಗೆ ಬರುತ್ತಿತ್ತು. ಯಾವ ರೋಗವಾದರೂ ನನ್ನ ಜ್ಞಾಪಕವಿಲ್ಲದ್ದು ಪ್ರವೇಶಿಸುವುದಿಲ್ಲ ಎನ್ನುತ್ತಿದ್ದನು. ಆತನಿಗೆ 60 ವರ್ಷಗಳು ಪೂರ್ತಿ ಆದಾಗ ಆರು ದಿನಗಳ ಅವಧಿಯಲ್ಲಿ ನಾಲ್ಕು ಸಲ ತೀವ್ರವಾದ ಹೃದಯಘಾತ (ಹಾರ್ಟ್‌ಸ್ಟ್ರೋಕ್) ಬಂದಿದೆ. ಹಾಗೆ ನಾಲ್ಕು ಸಲ ಬರುವವರೆಗೂ ಯಾರು ಬದುಕುವುದಿಲ್ಲ. ನಂತರ ಅದನ್ನು ಸರಿಮಾಡಿಕೊಳ್ಳುವುದು ನಡೆದಿದೆ. ಆತನು 24 ಗಂಟೆಗಳಲ್ಲಿ ಒಂದು ಇಲ್ಲವೆ ಎರಡು, ಎರಡುವರೆ ಗಂಟೆಗಳು ನಿದ್ರಿಸುತ್ತಿದ್ದನು. ಎರಡುವರೆ ಗಂಟೆಗಳ ನಿದ್ರೆ ತಿಂಗಳಿಗೊಂದು ಸಲ ಇರುತ್ತಿತ್ತೆಂದು, ಉಳಿದ ದಿನಗಳಲ್ಲಿ ಕಡಿಮೆ ನಿದ್ರಿಸುವವನೆಂದು, ಕೆಲವು ದಿನಗಳಲ್ಲಿ ಸ್ವಲ್ಪವೂ ನಿದ್ರಿಸುತ್ತಿರಲಿಲ್ಲವೆಂದು ಹೇಳಬಹುದು. ಆತನ ಶರೀರದಲ್ಲಿ ಇನ್ಸುಲಿನ್ ಲೋಪದಿಂದ ಶುಗರ್ ಲೆವಲ್ ಮುನ್ನೂರಕ್ಕೆ ಮೇಲೆ 350, 400 ವರೆಗೂ 18 ವರ್ಷಗಳಿಂದ ಇದೆ. ಆದರೂ ಆತನ ಶರೀರದಲ್ಲಿ ಎಂತಹ ಬದಲಾವಣೆ ಬರಲಿಲ್ಲ. ತಾನು ಪ್ರಯಾಣಿಸುತ್ತಿರುವ ಕಾರು ಎಷ್ಟೋ ಸಲ ಘೋರ ಅಪಘಾತಕ್ಕೆ ಗುರಿಯಾದರೂ ಆತನಿಗೆ ಎಂತಹ ಹಾನಿ ಉಂಟಾಗಲಿಲ್ಲ. ಇಷ್ಟು ದೊಡ್ಡ ಅಪಘಾತದಲ್ಲಿ ನೀವು ಹೇಗೆ ಬದುಕಿದ್ದೀರೆಂದು ಇತರರು ಕೇಳಿದಾಗ ನಾನು ಮಾಡಬೇಕಾದ ಕೆಲಸಗಳು, ಬರೆಯಬೇಕಾದ ಬರಹಗಳು ಇನ್ನೂ ಇವೆ ಎನ್ನುತ್ತಿದ್ದನು.

ಪ್ರಬೋಧಾನಂದ ಯೋಗೀಶ್ವರರು ಹೇಳುವ ಬೋಧನೆಗಳನ್ನು ಗ್ರಹಿಸಿದ ಕೆಲವರು ಜ್ಞಾನಿಗಳು, ಈ ಜ್ಞಾನವನ್ನು ಭೂಮಿಮೇಲೆ ಯಾವ ಮನುಷ್ಯರು ಹೇಳಲಾರರೆಂದುಕೊಂಡು ಆತನನ್ನು ಪ್ರತ್ಯಕ್ಷವಾಗಿ ನೋಡಿದ ನಂತರ ದೊಡ್ಡಭಾವನೆ ಅವರಲ್ಲಿ ಇಲ್ಲದಂತೆ ಹೋಗುತ್ತಿತ್ತು. ಕೆಲವರು ಇದೇ ವಿಷಯವನ್ನೇ "ನಿಮ್ಮನ್ನು ನೋಡದ ಮುಂಚೆ ಇರುವ ಭಾವನೆ ನಿಮ್ಮನ್ನು ನೋಡಿದ ನಂತರ ಏಕೆ ಇಲ್ಲದಂತೆ ಹೋಗಿದೆ" ಎಂದು ಕೇಳುತ್ತಿದ್ದರು. ಅದಕ್ಕೆ ಸಮಾಧಾನವಾಗಿ "ಯಾವುದಕ್ಕಾದರೂ ಕಾಲ ಬರಬೇಕು, ಮನುಷ್ಯ ಯಾವುದಕ್ಕೂ ಜವಾಬ್ದಾರಿ ಯಲ್ಲ" ಎಂದು ಅನ್ನುತ್ತಿದ್ದನು. ಎಂದಿಗೂ ತನ್ನ ಬಗ್ಗೆ ದೊಡ್ಡದಾಗಿ ಹೇಳಿಕೊಳ್ಳದೆ ತನ್ನನ್ನು ತಾನು ಕಡಿಮೆ ಮಾಡಿಕೊಂಡು ನಾನು ನಿಮ್ಮಂತಹ ಮನುಷ್ಯನೇ ನನಗೆ ಯಾರೂ ನಮಸ್ಕರಿಸಬೇಡಿ. ನೀವು ನೇರವಾಗಿ ದೇವರನ್ನೇ ಮುಗಿಯಿರಿ ಎನ್ನುತ್ತಿದ್ದನು. ಅಂತಹವನು ತನ್ನ ನ್ನು ದೊಡ್ಡದಾಗಿ ಅಂದುಕೊಳ್ಳುವಂತೆ ಈಗ ಈ ರಚನೆಯಲ್ಲಿ ಬರೆಯುವುದೇನೆಂದು ಯಾರಿಗಾದರೂ ಪ್ರಶ್ನೆ ಬಾರೆದೆ ಇರುವುದಿಲ್ಲ. ಅದಕ್ಕೆ ಪ್ರಬೋಧಾನಂದ ಯೋಗೀಶ್ವರರು ಏನು ಸಮಾಧಾನ ಹೇಳದೆ ನನ್ನ ಮೇಲಿರುವವನಿಗೆ ತಿಳಿದಿದೆಯೆಂದಿದ್ದಾನೆ.

ಆತನು ಹೇಳದಿದ್ದರೂ ನಾನು ಮಾತ್ರ ಹೇಳುತ್ತೇನೆ ನೋಡಿರಿ. ಆತನು ತನ್ನ ಚಿಕ್ಕ ವಯಸ್ಸಿನಿಂದ ಇತರರಿಗೆ ಜ್ಞಾನವನ್ನು ಹೇಳುತ್ತಿದ್ದರೂ, ನಂತರ ಪ್ರಬೋಧ, ಜನನ ಮರಣ ಸಿದ್ಧಾಂತವನ್ನು 27 ವರ್ಷಗಳ ವಯಸ್ಸಿನಲ್ಲಿಯೇ ಬರೆಯುವುದು ನಡೆದಿದೆ. 2+7=9 ಆಗುತ್ತದೆ ಅಲ್ಲವೆ! ಒಂಭತ್ತಕ್ಕೆ ಆತನ ಜೀವನದಲ್ಲಿ ಪ್ರತ್ಯೇಕತೆ ಇದೆ. ಏಕೆಂದರೆ 9 ದೇವರಿಗೆ ಗುರುತು ಎಂದು ಮೊದಲೇ ಹೇಳಿಕೊಂಡಿದ್ದೇವೆ. ಆತನು 27 ನೇ ವರ್ಷದಲ್ಲಿ ಆತ್ಮದ ಪ್ರತ್ಯೇಕತೆಯನ್ನು **ಜನನಮರಣ ಸಿದ್ಧಾಂತದ**ಲ್ಲಿಯೂ, ಜೀವಿಯ ಕರ್ಮಬಂಧವನ್ನು **ಪ್ರಬೋಧ** ಗ್ರಂಥದಲ್ಲಿ ಬರೆಯುವುದು ನಡೆದಿದೆ. ನಂತರ ಆತನಿಗೆ 36 ನೇ ವರ್ಷದಲ್ಲಿಯೂ ಸಹ ಪ್ರತ್ಯೇಕತೆಯನ್ನು ಹೊಂದಿದೆ. 3+6=9 ಆಗುವುದರಿಂದ ದೈವತ್ವದವೊಂದು ಅಂಶ ಆತನಲ್ಲಿ ಪ್ರಜ್ವಲಿಸಿ, ಭಗವದ್ಗೀತೆಯನ್ನು **ತ್ರೈತಸಿದ್ಧಾಂತ**

**ಭಗವದ್ಗೀತೆಯಾಗಿ** ಬರೆಯುವಂತೆ ಪ್ರೇರೇಪಿಸಿದೆ. ನಂತರ 45ನೇ ವರ್ಷದಲ್ಲಿ ಭಗವದ್ಗೀತೆ ರಚನೆಯನ್ನು ಪೂರ್ತಿ ಮಾಡುವುದೂ ನಡೆದಿದೆ. 54ನೇ ವರ್ಷದಲ್ಲಿ **ಶ್ರೀ ಕೃಷ್ಣನಮಂದಿರವನ್ನು ಪ್ರಬೋಧಾಶ್ರಮದಲ್ಲಿ** ಸ್ಥಾಪಿಸುವುದು ನಡೆದಿದೆ. ನಂತರ ಈಗ ನಂದನನಾಮ ಸಂವತ್ಸರ ಆತನಿಗೆ 63ನೇ ವರ್ಷದಲ್ಲಿ ನಡೆಯುತ್ತಿರುವಾಗ ಈ ರಚನೆಯನ್ನು ಬರೆಯುವುದು ನಡೆಯುತ್ತಿದೆ. ಈ ವಿಧವಾಗಿ 27ನೇ ವರ್ಷದಿಂದ ಪ್ರತಿ 9 ವರ್ಷಗಳಿಗೆ ಒಂದು ಪ್ರತ್ಯೇಕತೆಯನ್ನು ಸಂತರಿಸಿಕೊಳ್ಳುವುದು ನಡೆಯುತ್ತಿದೆ. ನಂದನನಾಮ ವರ್ಷದಲ್ಲಿ ಈ ವಿಧವಾಗಿ ನಡೆಯುತ್ತದೆಂದು ಶ್ರೀ ಪೋತುಲೂರಿ ವೀರಬ್ರಹ್ಮಯ್ಯನವರು ಬರೆದ ಕಾಲಜ್ಞಾನದಲ್ಲಿ **"ಆಧ್ಯಾತ್ಮಿಕ ಯೋಗ ಪುರುಷನು ಮಹಾ ಪ್ರಕಾಶವಾಗುತ್ತಾನೆ"** ಎಂದು ಇದೆ. ಪ್ರಸ್ತುತಕ್ಕೆ ಭೂಮಿಮೇಲೆ ಯೋಗ ಪುರುಷನು ಪ್ರಬೋಧಾನಂದ ಯೋಗೀಶ್ವರರು ಹೊರತು ಯಾರೂ ಇಲ್ಲ. ಯೋಗ ಪುರುಷನು ಎಂದರೆ ಪರಮಾತ್ಮ ಅಂಶದಿಂದ ಕೂಡಿಕೊಂಡ ಆತ್ಮ ಇರುವವನೆಂದು ಅರ್ಥ. ವೀರಬ್ರಹ್ಮಯ್ಯನವರು ಹೇಳಿದಂತೆ ಈ ವರ್ಷ ಪ್ರಬೋಧಾನಂದ ಪ್ರತ್ಯೇಕತೆ ಹೊರಬೀಳಬೇಕಾಗಿದೆ. ಆದ್ದರಿಂದ ಆತನಿಂದಲೇ ಬಲವಂತವಾಗಿ ಈ ಪುಸ್ತಕವನ್ನು ಬರೆಯಿಸುವುದು ನಡೆಯುತ್ತಿದೆ. ಇಷ್ಟುಕಾಲ ಮಸಿಬಟ್ಟೆಯೊಳಗಿನ ಮಾಣಿಕ್ಯದಂತೆ ಇರುವ ಪ್ರಬೋಧಾನಂದ ಎಂತಹ ಆತ್ಮವನ್ನು ಹೊಂದಿದ್ದಾನೋ ತಿಳಿದುಹೋಗಿದೆ.

ನಾನು ಇದ್ದರೇ ಆತನು ಇರುತ್ತಾನೆ ನಾನು ಹೋದರೆ ನನ್ನ ಹಿಂದೆ ಆತನೂ ಸಹ ಬರುತ್ತಾನೆ. ಅವಶ್ಯಕತೆಯೆನಿಸಿದರೆ ಇಬ್ಬರು ಮತ್ತೊಂದು ಒಂಭತ್ತು (9) ವರ್ಷಗಳು ಇರುತ್ತೇವೆ. ಅವಶ್ಯಕತೆ ಇಲ್ಲದಿದ್ದರೆ ಇಲ್ಲ. ಪ್ರಬೋಧಾನಂದ ಯೋಗೀಶ್ವರರಿಗೆ 63 ವರ್ಷಗಳು ಬರುವವರೆಗೂ ಆತನ ವಂಶದವರಾದ ಗುತ್ತಾದವರಿಗೆ ಆತನು ಯಾರೋ ಗೊತ್ತಿಲ್ಲ. ಆತನಿಗೋಸ್ಕರವೆ ಗುತ್ತಾ ವಂಶವು ತ್ರೈತ ಸಿದ್ಧಾಂತವನ್ನು ಅನುಸರಿಸಿ ಏರ್ಪಟ್ಟಿದೆಯೆಂದು. ಗುತ್ತಾ ವಂಶಸ್ಥರಿಗೆ ಯಾರಿಗೂ ತಿಳಿದಿಲ್ಲ. ಬ್ರಹ್ಮಯ್ಯನವರು ಹೇಳಿದ ಕಾಲಜ್ಞಾನದ ಪ್ರಕಾರ ಪ್ರಬೋಧಾನಂದ ವಿಷಯ ತಿಳಿದವರು ಬಹಳಜನರು ಸಂತೋಷಿಸುತ್ತಾರೆ.

ನನಗೆ ತಿಳಿದು ಪ್ರಬೋಧಾನಂದನಿಗೆ ತನ್ನ ವಂಶ ಎಂದರೆ ಬಹಳ ಇಷ್ಟ. ಎಲ್ಲಿಯೂ ಇಲ್ಲದ ಅರ್ಥ ಗುತ್ತಾವಂಶದಲ್ಲಿ ಇದೆಯೆಂದು ಹೇಳುತ್ತಿದ್ದನು. ಆ ವಂಶದಲ್ಲಿ ಹುಟ್ಟಬೇಕೆಂದರೆ ಸ್ವಲ್ಪ ಪೂರ್ವಜನ್ಮದ ಪುಣ್ಯ ಅಗತ್ಯವೆಂದು ಸಹ ಹೇಳುತ್ತಿದ್ದನು. ಪ್ರಸ್ತುತ ಗುತ್ತಾವಂಶದಲ್ಲಿರುವವರಿಗೆ ಒಂದು ಲಾಭವಿದೆ. ತನ್ನವಂಶದ ಮಹತ್ವವನ್ನು ತಿಳಿದು, ತನ್ನ ವಂಶ ತಯಾರಾಗುವುದಕ್ಕೆ ಕಾರಕನು ತ್ರೈತ ಸಿದ್ಧಾಂತ ಆದಿಕರ್ತ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರೆಂದು ತಿಳಿದು, ಆತನನ್ನು ಪ್ರತ್ಯಕ್ಷವಾಗಿಯಾಗಲಿ. ಪರೋಕ್ಷವಾಗಿಯಾಗಲಿ ದರ್ಶಿಸಿಕೊಂಡವರಿಗೆ ಸ್ವಲ್ಪ ಕರ್ಮ ವಿಮುಕ್ತಿ ಉಂಟಾಗುತ್ತದೆ. ಆತನ ಜ್ಞಾನವನ್ನು ಪೂರ್ತಿ ತಿಳಿದವರು ಯಾರಾದರು, ಯಾವ ಮತಸ್ಥನಿಗಾದರೂ, ಯಾವ ಕುಲಸ್ಥನಿಗಾದರೂ ಮಾನಸಿಕ ನೋವುಗಳು ತೊಲಗಿಹೋಗುತ್ತವೆ. ಯೋಗೀಶ್ವರರಾದ ಆಚಾರ್ಯ ಪ್ರಬೋಧಾನಂದ ತ್ರೈತ ಸಿದ್ಧಾಂತ ಜ್ಞಾನವನ್ನು ತಿಳಿದು ಪ್ರಚಾರ ಮಾಡಿದವರಿಗೆ ಜನ್ಮರಾಹಿತ್ಯವು ಏರ್ಪಡುತ್ತದೆ. ತ್ರೈತ ಸಿದ್ಧಾಂತದ ಪ್ರಕಾರ ಕಾಲ, ಕರ್ಮ ಚಕ್ರಗಳನ್ನು ಹಣೆಯ ಮೇಲೆ ಧರಿಸಿದವರನ್ನು ನೋಡಿ ದೇವತೆಗಳು, ದೆವ್ವಗಳು ಸಹಿತ ಭಯಪಡುತ್ತವೆ.

ಈ ಪುಸ್ತಕ ಓದುವವರಿಗೆ "ಇಷ್ಟಕ್ಕೂ ಇದನ್ನು ಹೇಳುವಾತನು ಯಾರು" ಎಂಬ ಪ್ರಶ್ನೆ ಬರಬಹುದು. ಅದಕ್ಕೆ ಉತ್ತರ ಏನೆಂದರೆ! ಮೇಲ್ನೋಟಕ್ಕೆ ಕಾಣಿಸಿ ಬರೆಯುವುದು ಪ್ರಬೋಧಾನಂದನೇ ಆದರೂ ವಾಸ್ತವವಾಗಿ ಬರೆಯುವುದು ಆತನಲ್ಲ. ಪ್ರಬೋಧಾನಂದ ಯೋಗೀಶ್ವರರ ಶರೀರದಲ್ಲಿ ಆತನು, ನಾನು ಇಬ್ಬರೂ ಇದ್ದೇವೆ. ಆದ್ದರಿಂದ ಎರಡನೆ ವ್ಯಕ್ತಿಯಾಗಿ ಆತನನ್ನು ಕುರಿತು ನಾನು ಹೇಳುತ್ತಿದ್ದೇನೆ. ಒಂದು ಶರೀರದಲ್ಲಿ ಇಬ್ಬರಿರುವುದೇನು? ಎಂದು ನೀವು ಅಂದುಕೊಳ್ಳಬಹುದು. ಎರಡನೆಯವನು ದೆವ್ವವೋ ಭೂತವೋ ಎಂದೂ ಸಹ ಅಂದುಕೊಳ್ಳಬಹುದು. ವಾಸ್ತವಕ್ಕೆ ನಾನು ದೆವ್ವವೂ ಅಲ್ಲ, ಭೂತವೂ ಅಲ್ಲ. ನಿಮ್ಮ ಶರೀರಗಳಲ್ಲಿಯೂ ಸಹ ನಿಮ್ಮಜೊತೆ ಆತ್ಮ ಎನ್ನುವುದು ಇದೆ. ನೀವು ಜೀವಾತ್ಮವಾದರೆ ನಿಮ್ಮಜೊತೆ ಇರುವುದು ಆತ್ಮ. ಆತ್ಮ ಎಂದರೆ ಯಾವ

ದೆವ್ವವೋ ಅಂದುಕೊಳ್ಳಬೇಡಿ. ಆತ್ಮ ಜೀವಾತ್ಮ ಯಾವ ಶರೀರದಲ್ಲಿಯಾದರೂ ಜೋಡಿ ಆತ್ಮಗಳಾಗಿ ನಿವಾಸಿಸುತ್ತಿರುತ್ತವೆ. ಪ್ರಬೋಧಾನಂದ ಶರೀರದಲ್ಲಿ ಆತನು (ಜೀವಾತ್ಮ) ತಲೆಯಲ್ಲಿರುವಾಗ, ನಾನು ಮಾತ್ರ ಶರೀರವೆಲ್ಲವೂ ವ್ಯಾಪಿಸಿ ಎಲ್ಲಾ ಅವಯವಗಳನ್ನು ಕದಲಿಸಿ ಶರೀರದಿಂದ ಕೆಲಸ ಮಾಡಿಸುತ್ತಿದ್ದೇನೆ. ಎಲ್ಲಾ ಶರೀರಗಳಲ್ಲಿ ಇದೇ ವಿಧಾನ (ರೀತಿ) ನಡೆಯುತ್ತಿದೆ. ಪ್ರಸ್ತುತ ನಿಮ್ಮ ಶರೀರ ದಲ್ಲಿಯೂ ಸಹ ಎಲ್ಲವುಗಳಿಂದ ಎಲ್ಲ ಕೆಲಸಗಳು ಮಾಡಿಸುವುದು ಆತ್ಮೆವೇ ಆಗಲಿ ನೀವಲ್ಲ. ಈ ವಿಷಯ ನಿಮಗೆ ಹೊಸದಾಗಿದ್ದರೂ ಇರುವ ಸತ್ಯ ಅಷ್ಟೇ. ಆತ್ಮ ಎಂದರೆ ಏನೋ ಇಲ್ಲಿಯವರೆಗೂ ಹಿಂದೂ (ಇಂದೂ) ಮತದಲ್ಲಿಯೇ ಸರಿಯಾಗಿ ತಿಳಿಯದಂತೆಹೋಗಿದೆ. ಇತರ ಮತಗಳಲ್ಲಿ ಆತ್ಮ ವಿಷಯವೇ ಯಾರಿಗೂ ತಿಳಿದಿಲ್ಲ. ನಾನು, ನಿಮ್ಮ ಶರೀರದಲ್ಲಿರುವ ಆತ್ಮ ಏಕ ಸ್ವರೂಪಗಳೇ ಆದರೂ ಬೇರೆಬೇರೆಯಾಗಿ ಇದ್ದೇವೆ. ನಾನು ಪರಮಾತ್ಮ ಅಂಶದಿಂದ ಕೂಡಿಕೊಂಡ ಆತ್ಮನು. ಆದ್ದರಿಂದ ದೇವರು ಮಾಡಬೇಕಾದ ಕೆಲಸವನ್ನು ನಾನೇ ಮಾಡುತ್ತಿದ್ದೇನೆ. ದೇವರು ಹೇಳಬೇಕಾದ ಜ್ಞಾನವನ್ನು ನಾನೇ ಹೇಳುತ್ತಿದ್ದೇನೆ. ಪ್ರಬೋಧಾನಂದನಾಗಿ ಕಾಣಿಸುತ್ತಾ ಆತನ ಶರೀರದಲ್ಲಿರುವ ನಾನು ಆತನಿಗೆ ತಿಳಿದಿದೆ. ಆದ್ದರಿಂದ ನಾವು ಇಬ್ಬರು ಒಂದೇ ಎಂಬ ಸೂತ್ರ ಈತನ ಶರೀರದಲ್ಲಿ ಮಾತ್ರ ಸರಿಹೋಗುತ್ತದೆ. ಇದೆಲ್ಲವೂ ಆಳವಾದ ಜ್ಞಾನ. ಒಂದೇ ಸಲ ನಿಮಗೆ ಅರ್ಥವಾಗುವುದಿಲ್ಲ.

ನಾನು ಪ್ರಬೋಧಾನಂದಯೋಗೀಶ್ವರರೊಂದಿಗೆ ಒಟ್ಟಿಗೆ ಇರುವುದಲ್ಲದೆ, ನಮ್ಮ ಇಬ್ಬರಿಗೂ (ಜೀವಾತ್ಮ,ಆತ್ಮಕ್ಕೆ) ಹಿರಿಯನಾದ ಪರಮಾತ್ಮ (ದೇವರು) ನನ್ನೊಂದಿಗೆ ಸೇರಿ ಇದ್ದಾನೆ. ನಾನು ಜೀವಾತ್ಮವಾದ ಪ್ರಬೋಧಾನಂದ ಯೋಗೀಶ್ವರರ ಜೊತೆ ಬೆರೆತಿರುವಾಗ, ನನ್ನೊಂದಿಗೆ ಪರಮಾತ್ಮ ಆದ ದೇವರು ಜೊತೆಯಾಗಿದ್ದಾನೆ. ಆದ್ದರಿಂದ ಒಂದೇ ಶರೀರದಲ್ಲಿರುವ ನಾವು ಮೂವರು ಒಂದೇ ಎಂದು ತಿಳಿಯಬೇಕು. ನಿಮ್ಮ ಶರೀರದಲ್ಲಿ ಆತ್ಮನಾದ ನಾನು

ಜೀವಾತ್ಮದೊಂದಿಗೆ ಸಂಬಂಧಪಟ್ಟು ಇದ್ದೇನಾಗಲಿ, ಪರಮಾತ್ಮನೊಂದಿಗೆ ಎಂತಹ ಸಂಬಂಧವೂ ಇಲ್ಲ. ಆದ್ದರಿಂದ ಉಳಿದವರಿಗೆ ಯಾರಿಗಾದರಾಗಲಿ, ದೇವರ ಜ್ಞಾನದ ರಹಸ್ಯವು ಪೂರ್ತಿಯಾಗಿ ತಿಳಿದಿಲ್ಲ. ಇದು ಒಂದು ಮತಕ್ಕೆ ಸಂಬಂಧಿಸಿದ ವಿಷಯವಲ್ಲ. ಎಲ್ಲಾ ಮತಗಳ ಮನುಷ್ಯರೊಳಗೆ ಇರುವ ವಿಧಾನ. ದೈವಾಂಶವಿರುವ ಆತ್ಮವಿರುವ ವ್ಯಕ್ತಿ ಮಾತ್ರವೇ ಸಂಪೂರ್ಣ ಜ್ಞಾನವನ್ನು ತಿಳಿಸುವ ಅವಕಾಶ ಇದೆ. ದೈವಾಂಶ ಇಲ್ಲದ ಮನುಷ್ಯ ಎಂತಹ ಪ್ರಜ್ಞಾವಂತನಾದರೂ ಎಂತಹ ಜ್ಞಾಪಕಶಕ್ತಿ ಇರುವವನಾದರೂ ಸರಿಯಾದ ದೈವಧರ್ಮಗಳನ್ನು ತಿಳಿಸಲಾರನು. ಈಗ ನೀವು ಒಂದು ಪ್ರಶ್ನೆಯನ್ನು ಕೇಳುವುದಕ್ಕೆ ಅವಕಾಶವಿದೆ. ಆದರೆ ಅದು ನಿಮ್ಮ ಯೋಚನೆಗೆ ಬರಲಿಲ್ಲ. ಆ ಪ್ರಶ್ನೆಯನ್ನು ನಾನೇ ಜ್ಞಾಪಕ ಮಾಡಿ ನಂತರ ನಾನೇ ಉತ್ತರ ಹೇಳುತ್ತೇನೆ. ದೈವಾಂಶವಿರುವ "ಆತ್ಮ ಇರುವ ಶರೀರದಲ್ಲಿ ಜೀವಾತ್ಮ ಹೇಗಿರುತ್ತದೆ? ಯಾವ ಸಾಮರ್ಥ್ಯ ಹೊಂದಿರುತ್ತದೆ? ಏನೆಂದುಕೊಳ್ಳುತ್ತಿರುತ್ತದೆ?" ಎಂದು ಕೇಳಬಹುದು. ಅದಕ್ಕೆ ಉತ್ತರ ಹೀಗೆ ಇದೆ.

ಹುಟ್ಟಿದ ಪ್ರತಿ ಮನುಷ್ಯನ ಶರೀರದಲ್ಲಿ ಎರಡು ಜೋಡಿ ಆತ್ಮಗಳು ಒಂದು ಪ್ರತ್ಯೇಕವಾದ ಆತ್ಮ ಇರುತ್ತದೆ. ಜೋಡಿಯಾಗಿರುವ ಆತ್ಮಗಳು ಎರಡರಲ್ಲಿ ಒಂದು ಜೀವಾತ್ಮವಾಗಿದ್ದು, ಎರಡನೆಯದು ಆತ್ಮ. ಇನ್ನು ಮೂರನೆಯದನ್ನು ಪರಮಾತ್ಮ ಎನ್ನುತ್ತೇವೆ, ಇಲ್ಲವೆ ದೇವರು ಎನ್ನುತ್ತೇವೆ. ಶರೀರದಲ್ಲಿರುವ ಜೋಡಿ ಆತ್ಮಗಳಲ್ಲಿ ಜೀವಾತ್ಮಗಿಂತ ದೊಡ್ಡದು, ಶರೀರವೆಲ್ಲಾ ವ್ಯಾಪಿಸಿದೆ, ಶರೀರಕ್ಕೆ ಅಧಿಪತಿಯಾಗಿರುವುದು ಆತ್ಮ. ಆತ್ಮಗಿಂತ ಬೇರೆಯಾಗಿದ್ದು ಶರೀರದೊಳಗೆ, ಶರೀರ ಹೊರಗೆ ಎಲ್ಲಾಕಡೆ ವ್ಯಾಪಿಸಿರುವುದು ಪರಮಾತ್ಮ. ಆತ್ಮ ಶರೀರವೆಲ್ಲವೂ ಇದ್ದು ಶರೀರವನ್ನು ಕರ್ಮದ ಪ್ರಕಾರ ನಡೆಸುತ್ತಾ ಜೀವಿಗೆ ಸುಖದುಃಖಗಳನ್ನು ಒದಗಿಸುತ್ತಿರುತ್ತದೆ. ಈ ವಿಧವಾಗಿ ಪ್ರತಿ ಶರೀರದಲ್ಲಿಯೂ ಇರುವಾಗ, ಜೀವಿಯು ಮಾತ್ರ ಶರೀರದಲ್ಲಿರುವುದು ತಾನೊಬ್ಬನೇ ಎಂದು ತಿಳಿಯುತ್ತಿರುತ್ತದೆ. ಜೀವಿಯು ತಾನು ಶರೀರದಲ್ಲಿ ಒಂದು ಭಾಗವಾಗಿ ಒಂದುಕಡೆ ಇರುವವನೆಂದು, ಶರೀರದಲ್ಲಿ ತಾನು ಏನೂ ಮಾಡಲಿಲ್ಲವೆಂದು ತಿಳಿಯದೆ ಅಜ್ಞಾನದಿಂದ ಶರೀರದಲ್ಲಿ ಆತ್ಮ

ಮಾಡುವ ಕೆಲಸವೆಲ್ಲ ತಾನೇ ಮಾಡುತ್ತಿರುವುದಾಗಿ ಅಂದುಕೊಳ್ಳುತ್ತಿದ್ದಾನೆ. ಶರೀರದಲ್ಲಿ ತಾನಿದ್ದೇನೆಂದುಕೊಳ್ಳದೆ ಶರೀರವೆ ತಾನೆಂದು ಜೀವಿಯು ಅಂದುಕೊಳ್ಳುತ್ತಿದ್ದಾನೆ. ಶರೀರವೇ ನಾನೆಂದು ತಿಳಿದ ಜೀವಿ, ಶರೀರದಲ್ಲಿ ಒಂದು ಆತ್ಮ ಇದೆ ಎಂದಾಗಲಿ, ಅದೇ ತನ್ನನ್ನು ನಡೆಸುತ್ತಿದೆ ಎಂದಾಗಲಿ ತಿಳಿದಿಲ್ಲ. ಅಷ್ಟೇ ಅಲ್ಲದೆ ಪ್ರಪಂಚವೆಲ್ಲವೂ ವ್ಯಾಪಿಸಿರುವ ದೇವರು ತಾನಿರುವ ಶರೀರದಲ್ಲಿ ಇದ್ದಾನೆಂದು ಸಹ ತಿಳಿದಿಲ್ಲ. ಇದು ಸಾಮಾನ್ಯ ಮನುಷ್ಯನಲ್ಲಿರುವ ವಿಧಾನವಾದರೆ, ಕೆಲವು ಲಕ್ಷಗಳ ವರ್ಷಗಳಿಗೊಂದು ಸಲ ಅಪರೂಪವಾಗಿ ಹುಟ್ಟುವ ಪರಮಾತ್ಮ ಅಂಶವಿರುವ ಆತ್ಮ ಇರುವ ಶರೀರದಲ್ಲಿ ಸಹ ಸಾಧಾರಣ ಮನುಷ್ಯನಲ್ಲಿ ಇರುವಂತೆ ಮೂರು ಆತ್ಮಗಳಿರುತ್ತವೆ.

ಸಾಧಾರಣ ಮನುಷ್ಯ ಶರೀರದಲ್ಲಿ ಆತ್ಮ ಜೀವಾತ್ಮದೊಂದಿಗೆ ಸಂಬಂಧಪಟ್ಟಿದ್ದು ಜೀವಿಗೆ ಸುಖದುಃಖಗಳನ್ನು ಒದಗಿಸುತ್ತಿರುತ್ತದೆ. ಅಂತಹ ಆತ್ಮ ಅದೇ ಶರೀರದಲ್ಲಿರುವ ಪರಮಾತ್ಮದೊಂದಿಗೆ ಯಾವ ಸಂಬಂಧ ಇಟ್ಟುಕೊಂಡಿರುವುದಿಲ್ಲ. ಆದರೆ ಪ್ರತ್ಯೇಕ ಜನ್ಮವಾದ ಪರಮಾತ್ಮ ಅಂಶವಿರುವ ಆತ್ಮ ಶರೀರದಲ್ಲಿ ಪರಮಾತ್ಮದೊಂದಿಗೆ ಸಂಬಂಧಪಟ್ಟಿರುವುದಲ್ಲದೆ, ಜೀವಾತ್ಮ ದೊಂದಿಗೂ ಸಹ ಸಂಬಂಧವನ್ನು ಸಾಗಿಸುತ್ತಿರುತ್ತದೆ. ಅಷ್ಟುದೊಡ್ಡ ಆತ್ಮವಿರುವ ಶರೀರದಲ್ಲಿನ ಜೀವಿಯು ಮಾತ್ರ ತಾನು ಜೀವಿಯಾಗಿಯೇ ಇದ್ದು ತನ್ನ ಶರೀರದಿಂದ ಹೇಳಲ್ಪಡುವ ಜ್ಞಾನವನ್ನು, ತನ್ನ ಶರೀರದಿಂದ ನಡೆಯುವ ಕೆಲವು ದೊಡ್ಡ ಕರ್ಮ ನಿವಾರಣೆ ಕಾರ್ಯಗಳನ್ನು ನೋಡಿ ಇವೆಲ್ಲವೂ ನಾನೇ ಮಾಡಿದ್ದೇನೆಂದು ಒಂದುಕಡೆ ಅನಿಸಿದರೂ, ಇಂತಹ ಜ್ಞಾನ ನನಗೆ ತಿಳಿದಿಲ್ಲವಲ್ಲ! ಎಂದು, ಇಂತಹ ದೊಡ್ಡ ಕಾರ್ಯಗಳನ್ನು ನಾನು ಮಾಡಲಾರೆನು ತಾನೆ! ಎಂದು ಅಂದುಕೊಳ್ಳುತ್ತಿರುತ್ತಾನೆ. ತನ್ನ ಶರೀರದಿಂದ ಹೇಳಲ್ಪಡುವ ಜ್ಞಾನವು ತನಗೂ ಸಹ ಹೊಸದಾಗಿ ತಿಳಿಯುವುದರಿಂದ, ಎಲ್ಲರಿಗಿಂತ ಮುಂಚೆ ತನಗೆ ತಿಳಿಯುವುದರಿಂದ, ಆ ಜೀವಿಯೂ ಸಹ ದೊಡ್ಡ ಜ್ಞಾನಿಯಾಗಿ ಬದಲಾಗುತ್ತಾನೆ. ಶರೀರದಲ್ಲಿನ ಅಹಮ್ ಮಾಡುವ ಕೆಲಸದಿಂದ ಜೀವಿಯು ಆಗಾಗ ಜ್ಞಾನವನ್ನು ಮರೆತು ಹೋಗಿ ಅಹಮ್ ಒಂದರ ಭಾವನೆಯಿಂದ ಎಲ್ಲಾ ನಾನೇ

ಮಾಡುತ್ತಿದ್ದೇನೆಂದು ಅಂದುಕೊಂಡರೂ ತಕ್ಷಣ ಆ ಜೀವಿಯು ಎಚ್ಚರಗೊಂಡು ತಾನು ಏನು ಮಾಡಲಿಲ್ಲವೆಂಬ ಭಾವನೆಯೊಳಗೆ ಬರುತ್ತಾನೆ. ದೈವಾಂಶವನ್ನು ಹೊಂದಿದ ಶರೀರದಲ್ಲಿರುವ ಜೀವಿಯು ಎಲ್ಲರಿಗಿಂತ ಮೊದಲು ಸಂಪೂರ್ಣ ಜ್ಞಾನಿಯಾಗಿ, ನಂತರ ಅಹಮ್‌ನನ್ನು ಬಿಟ್ಟು ತಾನು ಏನು ಮಾಡಲಿಲ್ಲವೆಂಬ ಭಾವನೆಯೊಳಗೆ ಬರುವುದರಿಂದ ಕರ್ಮಯೋಗಿಯಾಗಿ ಬದಲಾಗುತ್ತಾನೆ. ದೈವಾಂಶವಿರುವ ಆತ್ಮವಿರುವ ಶರೀರದಲ್ಲಿ ಆತ್ಮ ತಿಳಿಸುವ ದೇವರ ಜ್ಞಾನ ಮೊದಲು ಜೀವಿಗೆ, ನಂತರ ಪ್ರಜೆಗಳಿಗೆ ತಿಳಿಯುತ್ತದೆ.

ಹೊರಗೆ ಪ್ರಜೆಗಳ ದೃಷ್ಠಿಯಲ್ಲಿ ಒಂದು ಶರೀರದಿಂದ ದೈವಜ್ಞಾನ ತಿಳಿಯುವಾಗ, ಕಾಣಿಸುವ ವ್ಯಕ್ತಿಯೇ ಹೇಳುತ್ತಿದ್ದಾನೆಂದು ಅನಿಸುವುದರಿಂದ, ಆ ವ್ಯಕ್ತಿಯನ್ನು ಹೊರಗಿನ ಪ್ರಜೆಗಳು ಗೌರವಿಸುತ್ತಾರೆ. ಹೊರಗಿನ ಪ್ರಜೆಗಳಿಗೆ ಜ್ಞಾನ ಹೇಳುವ ವ್ಯಕ್ತಿ ದೊಡ್ಡವನೆಂದೆನಿಸಿದರೂ, ಆತನಲ್ಲಿ ಪ್ರತ್ಯೇಕವಾದ ದೈವಾಂಶವಿರುವ ಆತ್ಮ ಇದೆಯೆಂದು, ಅಂತಹ ಆತ್ಮ ಮೂಲಕ ದೇವರು ತನ್ನ ಜ್ಞಾನವನ್ನು ಹೊರಗೆ ತಿಳಿಸುತ್ತಿದ್ದಾನೆಂದು ಸ್ವಲ್ಪವೂ ತಿಳಿದಿಲ್ಲ. ಯಾರೂ ಹೇಳಲಾಗದ ಜ್ಞಾನವನ್ನು ಒಬ್ಬ ವ್ಯಕ್ತಿ ಹೇಳುತ್ತಿರುವಾಗ, ಆ ವ್ಯಕ್ತಿ ಹೇಳುವ ಜ್ಞಾನ ಇತರರು ಹೇಳುವ ಜ್ಞಾನಕ್ಕಿಂತ ಎಷ್ಟೋ ವಿಭಿನ್ನವಾದುದಾಗಿ, ಎಷ್ಟೋ ರುಚಿ ಇರುವುದಾಗಿ, ಎಷ್ಟೋ ಸಂತೋಷ ಕೊಡುವುದಾಗಿ ಇರುವಾಗ, ಅಂತಹ ಜ್ಞಾನವನ್ನು ಹೇಳುವ ಮನುಷ್ಯ ಸಾಧಾರಣ ಮನುಷ್ಯನಲ್ಲ ಎಂದು ಯಾರಿಗಾದರೂ ಯೋಚನೆ ಬಂದಾಗ ಹೇಳುವ ವ್ಯಕ್ತಿ ದೈವಾಂಶ ಇರುವವನೆಂದು ಹೊರಬೀಳುವುದಕ್ಕೆ ಅವಕಾಶವಿದೆ. ಆದರೂ ಅಂತಹ ಯೋಚನೆಯಿಂದ ಹೊರಬಿದ್ದು ಈತನು ಸಾಮಾನ್ಯವಾದ ಮನುಷ್ಯನೇಯೆಂಬ ಭಾವನೆಯೊಳಗೆ ಬರುತ್ತಾರೆ. ಹೇಳುವವನು ದೊಡ್ಡವನೆಂದು ಯೋಚನೆ ಬಂದರೂ, ಅಲ್ಲ ಆತನು ಸಾಮಾನ್ಯವಾದ ಮನುಷ್ಯನೇ ಎಂಬ ಭಾವನೆ ಏಕೆ ಬಂದಿದೆ? ಹೇಗೆ ಬಂದಿದೆ? ಎಂದರೆ! ದೇವರು ಗುಹ್ಯವಾದವನು (ರಹಸ್ಯವಾದವನು) ಅಲ್ಲವೆ! ಸಮುದ್ರವೆಂದರೂ ನೀರಿನಬಿಂದುವೆಂದರೂ ಎರಡರಲ್ಲಿಯೂ ನೀರೇ ಇರುವಂತೆ ದೇವರೆಂದರೂ,

ದೇವರ ಅಂಶ ಎಂದರೂ ಎರಡರಲ್ಲಿಯೂ ದೈವವೇ ಇದೆ. ದೇವರು ರಹಸ್ಯವಾದವನು, ಹುಡುಕಬೇಕಾದವನೆ ಆಗಲಿ, ತಿಳಿಯುವವನು ಅಲ್ಲ. ಆದ್ದರಿಂದ ದೈವಾಂಶವಿರುವ ಆತ್ಮವೂ ಸಹ ಯಾರಿಗೂ ತಿಳಿಯುವುದಿಲ್ಲ. ಈತನು ದೇವರು ಎಂಬ ಭಾವನೆ ಯಾರಿಗಾದರು ಬಂದರೆ, ಆತನು ದೇವರಲ್ಲ ಎನ್ನುವ ಪ್ರಪಂಚ ಆಧಾರಗಳು ನೂರು ಬರುತ್ತವೆ. ಪ್ರಪಂಚ ಕಾರ್ಯಗಳನ್ನು, ಆ ವ್ಯಕ್ತಿ ಅನುಭವವನ್ನು ನೋಡಿದ ನಂತರ ಯಾರೂ ಈತನು ದೈವಾಂಶ ಇರುವವನೆಂದು ಅಂದುಕೊಳ್ಳುವುದಿಲ್ಲ. ಆದ್ದರಿಂದ ದೈವಾಂಶ ಭೂಮಿ ಮೇಲೆ ಯಾವಾಗ ಬಂದರೂ ಯಾರಿಗೂ ತಿಳಿಯುವುದಿಲ್ಲ. ಬಂದುಹೋದ ನಂತರ ಇಂತಹ ಮನುಷ್ಯ ದೈವಾಂಶ ಇರುವವನೆಂದು ಹೇಳಬಹುದು. ಆದರೆ ಇರುವಾಗ ಆತನನ್ನು ಯಾರೂ ಗುರುತಿಸಲಾರರು. ಅದೇ ವಿಧವಾಗಿ ಒಂದು ಸಲ ಕೃಷ್ಣನು ದೈವಾಂಶಹೊಂದಿ ಬಂದಿದ್ದಾನೆ. ಆಗ ಆತನನ್ನು ಯಾರೂ ಗುರುತಿಸಲಿಲ್ಲ. ಈಗ ಆತನನ್ನು ದೇವರೆಂದು ನಾವು ಅಂದುಕೊಳ್ಳುತ್ತಿದ್ದೇವೆ.

ದೇವರ ಅಂಶಕ್ಕೆ ಸಾವುಹುಟ್ಟುಗಳು ಇಲ್ಲ. ಆದ್ದರಿಂದ ದೈವಾಂಶ ಇರುವ ಶರೀರವು ತಾಯಿ ಗರ್ಭದಿಂದ ಸಜೀವವಾಗಿ ಹೊರಬೀಳುತ್ತಿದೆ. ಆ ಶರೀರದಲ್ಲಿ ಮೂರು ಆತ್ಮಗಳು ಬೇರೆಬೇರೆಯಾಗಿ ಇದ್ದರೂ ಮಧ್ಯದಲ್ಲಿರುವ ಆತ್ಮ ಇತ್ತ ಜೀವಾತ್ಮದೊಂದಿಗೆ, ಅತ್ತ ಪರಮಾತ್ಮದೊಂದಿಗೆ ಸಂಬಂಧಹೊಂದಿದೆ. ಆದ್ದರಿಂದ ಒಂದೊಂದು ಸಲ ಮೂರು ಆತ್ಮಗಳು ಒಂದಾಗಿ ಇವೆ, ಒಂದೊಂದು ಸಲ ಬೇರೆಬೇರೆಯಾಗಿವೆ ಎಂದು ಹೇಳಬಹುದು. ದೇವರು ಮನುಷ್ಯನಲ್ಲಿದ್ದರೂ, ಅದರಲ್ಲಿನ ಜೀವಾತ್ಮ ಕೆಲವು ಸಮಯದಲ್ಲಿ ಬೇರೆಯಾಗಿದ್ದು ಕರ್ಮಗಳನ್ನು ಅನುಭವಿಸುತ್ತಿದೆ ಎಂದು ಹೇಳಬಹುದು. ಅದೇ ವಿಧವಾಗಿ ಕೆಲವು ಸಮಯದಲ್ಲಿ ಆತ್ಮ ಪ್ರತ್ಯೇಕವಾಗಿದ್ದೂ ಶರೀರದಿಂದ ದೈವಜ್ಞಾನ ಹೇಳುತ್ತದೆ. ಆತ್ಮ ಹೇಳುವಾಗ ಜೀವಾತ್ಮ ಕೇಳುತ್ತದೆ. ಆತ್ಮ ಹೇಳುವಾಗ ಮೊದಲು ಜೀವಾತ್ಮ ಆ ವಿಷಯವನ್ನು ತಿಳಿಯುವುದರಿಂದ ಆಗ ಆತ್ಮ, ಜೀವಾತ್ಮ ಬೇರೆಯಾಗಿವೆ ಎಂದು ಹೇಳಬಹುದು. ಈ ವಿಧವಾಗಿ ದೈವಾಂಶ ಇರುವ ಶರೀರದಲ್ಲಿ ಜೀವಾತ್ಮ, ಆತ್ಮ ಎರಡೂ

ನಿರೂಪಣೆಗೆ ಬಂದಿವೆ. ಆದರೆ ಇಲ್ಲಿಯವರೆಗೂ ನಿರೂಪಣೆಗೆ ಬರದಿರುವುದು ಒಂದು ಪರಮಾತ್ಮ ಮಾತ್ರವೇ. ಯಾವ ನಿರೂಪಣೆ ಇಲ್ಲದಿರುವಾಗ ಹೇತುಬದ್ಧವಾಗಿ, ಶಾಸ್ತ್ರಬದ್ಧವಾಗಿ ಪರಮಾತ್ಮ ಒಂದಿದೆ ಎಂದು ನಿರೂಪಿಸಲಾರೆವು ಆದ್ದರಿಂದ ಅಂತಹ ತೊಂದರೆ ಇಲ್ಲದಂತೆ ಪರಮಾತ್ಮ ಸಹ ನಿರೂಪಣೆಗೆ ಬಂದಿರುವ ಸಂದರ್ಭಗಳು ಕೆಲವು ಇವೆ. ಆತ್ಮ ಶರೀರದೊಳಗೆ ಮಾತ್ರ ವ್ಯಾಪಿಸಿರುವಾಗ, ಪರಮಾತ್ಮ ಪ್ರಪಂಚವೆಲ್ಲವೂ ಶರೀರದೊಳಗೆ, ಶರೀರದ ಹೊರಗೆ ವ್ಯಾಪಿಸಿದೆ. ಆತ್ಮ ಶರೀರವೆಲ್ಲವೂ ಅಧಿಕಾರ ಹೊಂದಿರುವಾಗ, ಪರಮಾತ್ಮ ಚರಾಚರ ಪ್ರಪಂಚವೆಲ್ಲಾ ಅಧಿಕಾರ ಹೊಂದಿದೆ. ಆದ್ದರಿಂದ ದೈವವಿರುವ ಶರೀರವು ಹೊರಗೆ ಸಾಧಾರಣವಾಗಿ ಕಾಣಿಸಿದರೂ, ಆ ಶರೀರದಿಂದ ಬರುವ ಆಜ್ಞೆ ಚರಾಚರ ಪ್ರಪಂಚವೆಲ್ಲಾ ಜಾರಿಯಾಗಬಹುದು. ನಿಂತುಹೋಗು ಎಂದರೆ ಬೀಸುವ ಗಾಳಿ ನಿಂತುಹೋಗುತ್ತದೆ. ಕದಲುವ ಸಮುದ್ರವು ನಿಂತುಹೋಗಬಹುದು. ಉರಿಯುವ ಅಗ್ನಿ ನಂದುಹೋಗುತ್ತದೆ. ಗತಕಾಲದಲ್ಲಿ ದೈವಾಂಶ ಇರುವ ಜನ್ಮಗಳು ಬರುವುದು, ಎಷ್ಟೋ ಜ್ಞಾನವನ್ನು ಬೋಧಿಸುವುದು ನಡೆದಿರುವುದಲ್ಲದೆ, ಬಾಯಿ ಮಾತಿನಿಂದ ಪ್ರಕೃತಿಯನ್ನು ಶಾಸಿಸಿದ ಸಂಘಟನೆಗಳು ನಡೆದಿವೆ. ಆದ್ದರಿಂದ ಶರೀರದಲ್ಲಿ ಜೀವಾತ್ಮ, ಆತ್ಮವೇ ಅಲ್ಲದೆ, ಪರಮಾತ್ಮ ಸಹ ನಿರೂಪಣೆಗೆ ಬಂದಿದೆಯೆಂದು ತಿಳಿದುಹೋಗಿದೆ. ದೈವಾಂಶ ಯಾವಾಗಲೋ ಒಂದುಸಲ ಭೂಮಿಮೇಲೆ ಬಂದು ಅದರ ಜ್ಞಾನವನ್ನು ತಾನೇ ತಿಳಿಸುತ್ತದೆಂದು, ಹಾಗೆ ಬರಲಿಲ್ಲವೆಂದು ವಾದಿಸುವವರಿಗೆ ಉತ್ತರವಾಗಿ ದೈವಾಂಶ ತನ್ನ ಇರುವಿಕೆಯನ್ನು ಜ್ಞಾನಿಗಳು ಮಾತ್ರ ತಿಳಿಯುವುದಕ್ಕೆ ತಕ್ಕಂತೆ ಯಾವುದೋ ಒಂದು ಆಧಾರವಿರುವಂತೆ ಮಾಡಿರುತ್ತದೆಂದು, ಅಂತಹ ಆಧಾರದಿಂದಲೇ ಶ್ರೀಕೃಷ್ಣನನ್ನು ಭೀಷ್ಮನು ಗ್ರಹಿಸಿದ್ದಾನೆಂದು ತಿಳಿಸುತ್ತಾ ಇಲ್ಲಿಗೆ ನಾನು (ಆತ್ಮ) ಮುಗಿಸುತ್ತಿದ್ದೇನೆ.



**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲ ಎಂದರು ಅದು ಅಸತ್ಯವಲ್ಲ.**

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ = ಬೇವಕೂಫ್ = ನೃಸಿಂಹ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು "ಇಂದೂ ಸರೋವರವೆಂದು" ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ 'ಜ್ಞಾನಿ' ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು 'ಇಂದೂ' ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ 'ಇಂದೂ ಮಹಾ ಸಮುದ್ರ'ವಾಗಿ ಕರೆಯುತ್ತಿದ್ದರು. ("ತ್ರೈತಾಕಾರ ರಹಸ್ಯ" ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

**visit website : www.thraithashakam.org**

ಸವಿವರವಾಗಿ ತಿಳಿಸಿದ್ದಾರೆ. ಈದಿನ ದಕ್ಷಿಣ ಭಾರತದೇಶಕ್ಕೆ ಪರಿಮಿತವಾದ ದ್ರಾವಿಡರ ಮೇಲೆ ಆಕ್ರಮಿಸಿಕೊಂಡ ಆರ್ಯ ಜಾತಿ ಇಂದಿಗೂ ಆಧಿಪತ್ಯ ನಡೆಸುತ್ತಿರುವುದೆಂಬ ನಗ್ನ ಸತ್ಯ ತಿಳಿಯಬಹುದು. ಮಾನವಾಕಾರದಲ್ಲಿರುವ ಭಾರತದೇಶದ ಚಿತ್ರ ಪಟ ಗ್ರಂಥದೊಳಗೆ, ಪಾಠಕರನ್ನು ನಿಶ್ಚೇಷ್ಟರಾಗಿ ಮಾಡುವುದು.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧ**



# ಇಂದೂ ದೇಶವೇ ಇಂಡಿಯಾ!

**ಹಿ**ಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.
2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.
3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.
4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.
5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.
6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ (I.G.V)**

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ







**ಸುವಾರ್ತ ಕ್ರೈಸ್ತವ ಸಂಘ (S.K.S)**

(Regd.No.: 159/2015)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org

*www. suvarthakraisthavasangham.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ




(Regd.No.459/20111)

**ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ (K.I.S.S)**

**(Regd.No.: 459/2011)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

**e-mail id : info@khudaislamicspiritualsociety.org**

***www. khudaislamicspiritualsociety.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ-509381

e-mail id : info@dravidashreshtisangham.org

***www.dravidashreshtisangham.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ




**ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ (R.B.D.B.S)**

**(Regd.No.: 309/2015)**

ತಾರ್ನಾಕ, ಹೈದರಾಬಾದ್, ತೆಲಂಗಾಣ–500007.

e-mail id : info@ravanabrahmadravidabrahmanasangham.org

***www.ravanabrahmadravidabrahmanasangham.org***

# ಅಮ್ಮ ಕುಲ

## (ಕಮ್ಮ ಕುಲ)

ಗು = ಪರಮಾತ್ಮ

ತಾ = ಆತ್ಮ

ತ = ಜೀವಾತ್ಮ





Author :

The Only GURU of Three Religions

The Spiritual Emperor, Thraitha Theorem Originator

Sri Acharya Prabodhananda Yogeeshwarulu

www.thraithashakam.org